# ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿ : ಒಂದು ಅವಲೋಕನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು
ಆಶಾ ಬಾಬು ಯಂಕಪ್ಪಗೋಳ

ಮಾರ್ಗದರ್ಶಕರು
ಡಾ. ಎಸ್. ಚನ್ನಸ್ವಾಮಿ ಸೋಸಲೆ
ಸಹ ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೯

651

651
ಸಿರಿಗನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿ : ಒಂದು ಅವಲೋಕನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು
**ಆಶಾ ಬಾಬು ಯಂಕಪ್ಪಗೋಳ**

ಮಾರ್ಗದರ್ಶಕರು
**ಡಾ.ಎಸ್.ಚಿನ್ನಸ್ವಾಮಿ ಸೋಸಲೆ**
ಸಹ ಪ್ರಾಧ್ಯಾಪಕರು





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೮

## ದೃಢೀಕರಣ ಪತ್ರ

'ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿ: ಒಂದು ಅವಲೋಕನ' ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗದ ಎಂ.ಫಿಲ್. ಪದವಿಗಾಗಿ ಆಶಾ ಬಾಬು ಯಂಕಪ್ಪಗೋಳ., ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 15.10.09

ಡಾ. ಎನ್.ಚಿನ್ನಸ್ವಾಮಿ ಸೋಸಲೆ
ಮಾರ್ಗದರ್ಶಕರು ಮತ್ತು ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

'ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿ: ಒಂದು ಅವಲೋಕನ' ಎಂಬ ನಿಬಂಧವನ್ನು ಡಾ. ಎಸ್.ಚಿನ್ನಸ್ವಾಮಿ ಸೋಸಲೆ, ಸಹ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 15-10-2009


(ಆಶಾ ಬಾಬು ಯಂಕಪ್ಪಗೋಳ)

ಸಂಶೋಧಕರು

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಡಿಗನ್ನ್ಶ್ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ



* * *

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ಪ್ರಸ್ತಾವನೆ

ಭಾರತೀಯ ಸಮಾಜದಲ್ಲಿ ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಲು ಅನೇಕ ಚಳವಳಿಗಳು ನಡೆದಿವೆ. ಹಾಗೆಯೇ ಚಳವಳಿಗಳು ಪ್ರಾದೇಶಿಕ ನೆಲೆಯಲ್ಲಿ ಹುಟ್ಟಿ ಗುರುತರವಾದ ಜವಾಬ್ದಾರಿಯನ್ನು ಪೂರೈಸಿದ್ದಲ್ಲದೆ ಅನುಕರಣೀಯವಾಗಿ ಉಳಿದುಕೊಂಡು ಬಂದಿವೆ. ಅಂತಹ ಪ್ರಾದೇಶಿಕ ಚಳವಳಿಗೆ ತವರು ನೆಲ ಮುಂಬಯಿ ಕರ್ನಾಟಕ, ಸಮಾಜೋಧಾರ್ಮಿಕ ನೆಲೆಯಲ್ಲಿ ಸಾಮಾಜಿಕ ಪ್ರಜ್ಞೆ ಮೂಡಿಸಿದ ಬಸವಣ್ಣ ಹುಟ್ಟಿದ ಪ್ರದೇಶ ಈಗಿನ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ. ಬಸವಣ್ಣನ ಕಾಲದಿಂದಲೂ ಇಲ್ಲಿ ಸಾಮಾಜಿಕ ಅಸಮಾನತೆ ವಿರುದ್ಧ ಹೋರಾಟಗಳು ನಡೆಯುತ್ತಲೇ ಬಂದಿವೆ. ಅಷ್ಟೆ ಅಲ್ಲದೇ ಬಾಬಾಸಾಹೇಬ್ ಅಂಬೇಡ್ಕರ್ ತಮ್ಮ ಹೋರಾಟದ ದಿನಗಳಲ್ಲಿ ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಯ ಅನೇಕ ಪ್ರದೇಶಗಳಿಗೆ ಬಂದು ದಲಿತರನ್ನು ಜಾಗೃತಗೊಳಿಸುವಂತಹ ಕೆಲಸ ಮಾಡಿದ್ದಾರೆ. ಆದರೂ ಸಹ ಈ ಪ್ರದೇಶಗಳಲ್ಲಿ ಇಂದಿಗೂ ಅಸ್ಪೃಶ್ಯತೆ, ದೌರ್ಜನ್ಯಗಳು ಮುಂದುವರಿದಿರುವುದು ವಿಪರ್ಯಾಸದ ಸಂಗತಿಯೇ ಸರಿ. ಬಾಗಲಕೋಟೆ ಜಿಲ್ಲೆಯಲ್ಲಿ ಅಷ್ಟೇ ಅಲ್ಲದೆ ಇಡೀ ಕರ್ನಾಟಕದಲ್ಲಿಯೇ ದಿನನಿತ್ಯ ದಲಿತರ ಮೇಲೆ ದೌರ್ಜನ್ಯಗಳು ನಡೆಯುತ್ತಿವೆ. ಇದನ್ನು ನಿವಾರಣೆ ಮಾಡವತ್ತ ದಲಿತಪರ ಚಿಂತಕರು, ಹೋರಾಟಗಾರರು, ದಾರ್ಶನಿಕರು, ಬರಹಗಾರರು ಸಮಾಜ ಸುಧಾರಣೆಗೆ ಎಷ್ಟೇ ಪ್ರಯತ್ನಿಸಿದರು ಅದು ಫಲಕಾರಿಯಾಗುತ್ತಿಲ್ಲ. ಹಿಂದೂ ಧರ್ಮದ ಚಾತುರ್ವರ್ಣ ಪದ್ಧತಿಯಿಂದ ಉದ್ಭವಿಸಿದ ವರ್ಗ ಸಂಘರ್ಷದಲ್ಲಿ ಅಸ್ಪೃಶ್ಯರು ಬಲಿಪಶುಗಳಾಗುತ್ತಿದ್ದಾರೆ.

ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ದಲಿತರು ವಾಸವಾಗಿದ್ದು ಅಲ್ಲಿ ಜಮೀನ್ದಾರರು ಪ್ರಬಲವಾಗಿದ್ದಾರೆ. ದಲಿತರು ಅನಕ್ಷರಸ್ಥರಾಗಿದ್ದು ಶ್ರೀಮಂತರ ದಬ್ಬಾಳಿಕೆಯಲ್ಲಿ ನಲುಗಿ ಹೋಗುತ್ತಿದ್ದಾರೆ.

ಇದೇ ಪರಿಸ್ಥಿತಿ ಬಾಗಲಕೋಟೆ ಜಿಲ್ಲೆಯಲ್ಲಿಯೂ ಇದೆ. ಗ್ರಾಮೀಣ ಪ್ರದೇಶದಲ್ಲಿ ದಲಿತರ ಮೇಲೆ ದೌರ್ಜನ್ಯ ಹಾಗೂ ಅವರ ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಉಲ್ಲಂಘಿಸುವ ಕೆಲಸ ನಡೆಯುತ್ತಿದೆ. ಇಂದಿಗೂ ಈ ಜನ ದೇವಾಲಯಗಳಿಗೆ ಪ್ರವೇಶ ಮಾಡುವಂತಿಲ್ಲ, ಕೆರೆ ನೀರು ಮುಟ್ಟುವಂತಿಲ್ಲ. ಇತ್ತೀಚೆಗೆ ಸರ್ಕಾರವು ಶಾಲಾ ಮಕ್ಕಳಿಗೆ ಜಾರಿಗೆ ತಂದಿರುವ ಮದ್ಯಾಹ್ನದ ಬಿಸಿ ಊಟದ ವೇಳೆಯಲ್ಲಿ ದಲಿತ ಮಕ್ಕಳು ಸವರ್ಣೀಯ ಮಕ್ಕಳ ಜೊತೆ ಕೂರುವಂತಿಲ್ಲ. ಇದೊಂದು ಚಿಂತನೆಗಿಂತ ಆತ್ಮಾವಲೋಕನದ ವಿಷಯವಾಗಿದೆ. ದಲಿತ ಮಹಿಳೆಯರನ್ನು ಅಡುಗೆಯವರನ್ನಾಗಿ ಒಪ್ಪಿಕೊಳ್ಳಲು ನಮ್ಮ ವೈದಿಕ ಹಾಗೂ ಶೂದ್ರ ಮನಸ್ಸುಗಳು ಸಿದ್ಧವಾಗಿಲ್ಲ. ಹಳ್ಳಿಗಳಲ್ಲಿ ಸವರ್ಣಿಯರ ಮಾಲೀಕತ್ವದ ಹೋಟೆಲ್‌ಗಳಲ್ಲಿ ದಲಿತರಿಗೆ ಪ್ರವೇಶ ನಿಷೇಧ.[೧] ಹೋಟೆಲುಗಳ ಹೊರಗೆ ನಿಂತು ಅವರೇ ಇಟ್ಟಿರುವ ಗ್ಲಾಸ್‌ನಲ್ಲಿ ಚಹಾ ಕುಡಿದು ತೊಳೆದು ಇಡುವ ವ್ಯವಸ್ಥೆ ಬಾಗಲಕೋಟೆಯ ಕೃಷ್ಣಾ ನದಿದಂಡೆ ಹಳ್ಳಿಗಳಲ್ಲಿ ಇವತ್ತಿಗೂ ಜಾರಿಯಲ್ಲಿರುವುದು ಕಂಡುಬರುತ್ತದೆ. ಭಾರತದ ಸಂವಿಧಾನವು ಅಸ್ಪೃಶ್ಯತೆ ಆಚರಣೆಯ ನಿಷೇಧ ಕಾಯ್ದೆ ೧೯೫೫ರಲ್ಲಿ ಅಪರಾಧಗಳ ಕಾಯ್ದೆಯ ನಂತರ ಈ ಕಾಯ್ದೆಯನ್ನು ೧೯೭೬ರಲ್ಲಿ ನಾಗರಿಕ ಹಕ್ಕುಗಳ ಸಂರಕ್ಷಣಾ ಕಾಯ್ದೆ ಎಂಬುದಾಗಿ ಬದಲಾಯಿಸಲಾಯಿತು. ಪರಿಚ್ಛೇದ ೧೫,೧೬,೧೭, ೩೮, ೪೬ರನ್ನು ಜಾರಿಗೆ ತಂದಿದ್ದರು. ಅವು ಕೇವಲ ಪುಸ್ತಕದ ಪುಟಗಳಲ್ಲಿ ಮಾತ್ರ ಮುದ್ರಿತಗೊಂಡು, ಅಸ್ಪೃಶ್ಯತೆ ಆಚರಣೆ ದಿನಂಪ್ರತಿ ನಡೆಯುತ್ತಲೇ ಇದೆ.

ಹಾಗೆಯೇ ಸಮಾಜವೆನ್ನುವುದು ನಿರಂತರ ಬದಲಾವಣೆಯಾಗುತ್ತಿರುವ ಒಂದು ಪ್ರಕ್ರಿಯೆ ಅದೇರೀತಿ ಅಸ್ಪೃಶ್ಯತೆಯನ್ನು ತೊಡೆದುಹಾಕುವ ದಿಸೆಯಲ್ಲಿ ಭಾರತದ ಹಲವಾರು ಮಹಾಪುರುಷರು ಕಾಲಕಾಲಕ್ಕೆ ಈ ಅಸ್ಪೃಶ್ಯತೆಯ ವಿರುದ್ಧ ಸಮರವನ್ನು ಸಾರಿರುವ ಪ್ರಯತ್ನಗಳು ನಡೆದಿವೆ ಮತ್ತು ನಡೆಯುತ್ತಿವೆ. ಯಾವುದೇ ಜನಾಂಗಕ್ಕೂ ಅನ್ಯಾಯವಾಗದಂತೆ ರಕ್ಷಣೆ ಮಾಡಬೇಕಾದವರು ಪೊಲೀಸರು. ಇವರು ಯಾವುದೆ ಜಾತಿ, ಜನಾಂಗ, ಎಂದು ಬೇಧ-ಭಾವ ಮಾಡದೇ ಎಲ್ಲಿರಿಗೂ ಸಮಾನವಾಗಿ ನ್ಯಾಯ, ರಕ್ಷಣೆ ಕೊಡುವ ಕೆಲಸ ಮಾಡಬೇಕು. ಆದರೆ ದಲಿತರ ವಿಷಯದಲ್ಲಿ ಈ ನಂಬಿಕೆ ಹುಸಿಗೊಂಡಿದೆ. ದಲಿತರು ಸಮಾಜದಿಂದಲೇ ಹೊರಹಾಕಲ್ಪಟ್ಟ ಅಸ್ಪೃಶ್ಯರು. ಪೊಲೀಸ್ ಇಲಾಖೆಯಲ್ಲಿರುವ ಪಟ್ಟ ಭದ್ರ ಹಿತಾಸಕ್ತಿಗಳು ಮತ್ತು ಪ್ರಭಾವಿ ಪ್ರಬಲ ಕೋಮಿನವರು ದಲಿತರ ಮೇಲೆ ನಡೆಸುತ್ತಿರುವ ಅಪರಾಧ ಹೇಳತೀರದು. ಯಾರು ಕಾನೂನು ರಕ್ಷಕರಾಗಬೇಕೋ, ಅವರೆ ದಲಿತರ ವಿಷಯದಲ್ಲಿ ಭಕ್ಷರಾಗಿರುವುದಕ್ಕೆ ನೂರಾರು ಜ್ವಲಂತ ಸಾಕ್ಷಿಗಳಿವೆ. ಎಷ್ಟೋ ದಲಿತರ ಅಹಲವಾಲುಗಳು ಠಾಣೆಯಲ್ಲಿ ದಾಖಲಾಗುವುದೇ ಇಲ್ಲ. ದಾಖಲಾದರೂ ಅದು 'ಪ್ರಥಮ ಮಾಹಿತಿ'(FIR) ನಿಂದ ದೂರ ಉಳಿದಿರುತ್ತವೆ.[೨] ಆದರೂ ದಲಿತರು ಧೈರ್ಯಮಾಡಿ ಪೊಲೀಸ್ ಠಾಣೆಯಲ್ಲಿ ಸಂವಿಧಾನಾತ್ಮಕ ಹಕ್ಕನ್ನು ಚಲಾಯಿಸಲು ಮುಂದಾದರೆ, ಇವರಿಗಿಂತ ಸವರ್ಣೀಯರೇ ಮೊದಲು ಪೋಲಿಸ್ ಠಾಣೆಯಲ್ಲಿ ತಮ್ಮ ಪ್ರಭಾವದ ಪ್ರಬಲ ಪ್ರಯತ್ನವನ್ನು ಬಿರುಸಿನಿಂದಲೇ ಮಾಡಿರುತ್ತಾರೆ.[೩] ಹೀಗಿರುವಾಗ

ದಲಿತರು ಕೋರ್ಟಿನ ಮೆಟ್ಟಿಲು ಹತ್ತಿದರು ನ್ಯಾಯ ಸಿಗುತ್ತದೆ ಎಂಬ ನಂಬಿಕೆ ಇಲ್ಲ. ಏಕೆಂದರೆ ಅಲ್ಲಿಯೂ ಪ್ರಬಲ ಕೋಮಿನವರದೇ ಕಾರುಬಾರಾಗಿರುತ್ತದೆ. ಇದನ್ನು ಮೀರಿ ದಲಿತರು ಸವರ್ಣೀಯರ ವಿರುದ್ಧ ಕಾನೂನು ಸಮರ ಸಾರಿದರೆ ನಡೆಯುವುದು ಹಿಂಸೆ, ಅತ್ಯಾಚಾರ, ಕೊಲೆ ಇವುಗಳಿಗೆ ದಲಿತರ ಜೀವಗಳು ಅಮಾನುಷವಾಗಿ ಬಲಿಯಾಗುತ್ತಿವೆ.

ಈ ನಿಟ್ಟಿನಲ್ಲಿ ದಲಿತ ಮಹಿಳೆಯರು ಸಹ ಸಮಾಜದ ಅನಿಷ್ಟ ಪದ್ಧತಿಗಳಿಗೆ ಬಲಿಪಶುಗಳಾಗುತ್ತಿದ್ದು, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಅತ್ಯಾಚಾರಗಳಿಗೆ ಒಳಗಾಗುತ್ತಿದ್ದಾಳೆ. ಇವೆಲ್ಲವೂ ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ದೌರ್ಜನ್ಯ ಹಾಗೂ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ಇಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಯಾವ ಬೆಲೆಯೂ ಇಲ್ಲದಾಗಿದೆ. ಹಾಗಾಗಿ ಬಲಿಷ್ಠರು ಅಬಲರ ಮೇಲೆ ನಿರಂತರ ದೌರ್ಜನ್ಯ ಮಾಡುತ್ತಿದ್ದಾರೆ. ಜಾತಿ ಪದ್ದತಿ, ಮಲ ಹೊರುವ ಪದ್ಧತಿ, ಸಾಮಾಜಿಕ ವೈಷಮ್ಯಗಳು ಮತ್ತು ದೇವದಾಸಿ ಪದ್ಧತಿಯಂತಹ ವಿರುದ್ಧ ಬುದ್ಧ, ಬಸವ, ಅಂಬೇಡ್ಕರ ಮುಂತಾದವರು ಪ್ರತಿಭಟಿಸುವುದರಿಂದ ಒಂದಿಷ್ಟು ಸ್ಥಾನಮಾನಗಳು ದಲಿತರಿಗೆ ದೊರೆಯುತ್ತಿವೆ.[೪] ಅಸಮಾನತೆಯನ್ನು ಸಮಾಜದ ಮೂಲ ಬೇರಿನಲ್ಲಿಯೇ ಇದೆ ಎಂಬುದನ್ನು ಮನಗಂಡವರು ಬುದ್ಧ, ಬಸವ ಮತ್ತು ಅಂಬೇಡ್ಕರ್ ಇವರೆಲ್ಲರೂ ಬಹುಸಂಖ್ಯಾತರ ಪರ, ಬಡವರ ಪರ, ಶೋಷಿತರ ಹಾಗೂ ಇಲ್ಲದವರ ಪರವಾಗಿದ್ದರು. ಆದ್ದರಿಂದಲೇ ಇವರ ಚಳವಳಿಗೆ ಒಂದು ಬೇರೆಯೇ ಆದ ತಾತ್ವಿಕತೆ ದೊರೆಯಿತು.

ಭಾರತದ ಚರಿತ್ರೆ ದಲಿತ ಮತ್ತು ಶೂದ್ರರಿಂದ ಪುನಾರಚನೆ ಆಗಬೇಕಿದೆ. ಈ ನಿಟ್ಟಿನಲ್ಲಿ ಅನೇಕ ಸಂಶೋಧನೆಗಳು ನಡೆಯುತ್ತಿದ್ದು ಇತಿಹಾಸದಲ್ಲಿ ನಿರ್ಲಕ್ಷಿಸಲ್ಪಟ್ಟ ಕೆಳವರ್ಗದವರ ಚರಿತ್ರೆ ದಾಖಲಾಗುತ್ತಿದೆ. ಹಾಗೆ ವೈದಿಕರ ಚರಿತ್ರೆ ಎಷ್ಟು ಹಳೆಯದೋ ಅವೈದಿಕ ಚರಿತ್ರೆಯು ಅಷ್ಟೆ ಆಳವಾಗಿದೆ. ಬುದ್ಧ, ಬಸವ, ಅಂಬೇಡ್ಕರ್‌ರು ಶೋಷಿತರನ್ನು ಒಂದೆಡೆ ಸೇರಿಸುವ ಪ್ರಯತ್ನ ಮಾಡಿದರು.''[೫]

## ಭೌಗೋಳಿಕ ಹಿನ್ನೆಲೆ

ಬಾಗಲಕೋಟೆ ಜಿಲ್ಲೆ ಕರ್ನಾಟಕ ರಾಜ್ಯ ಉತ್ತರ ಭಾಗದಲ್ಲಿದ್ದು ೭೪° - ೫೯° ರಿಂದ ೭೬° - ೨೦° ರ ಪೂರ್ವ ರೇಖಾಂಶ ಹಾಗೂ ೧೫° - ೪೯° ರಿಂದ ೧೬° - ೪೬° ಉತ್ತರ ಅಕ್ಷಾಂಶಗಳವರೆಗೆ ವ್ಯಾಪಿಸಿದೆ. ಇದು ಬಿಜಾಪುರ, ಬೆಳಗಾವಿ, ಗದಗ, ಕೊಪ್ಪಳ, ರಾಯಚೂರು ಜಿಲ್ಲೆಗಳ ಗಡಿ ಪ್ರದೇಶ ಹೊಂದಿದೆ. ಜಿಲ್ಲೆ ವಿಸ್ತೀರ್ಣ ೬೫೯೩ ಚ.ಕಿ.ಮೀ ರಾಜ್ಯದ ವಿಸ್ತೀರ್ಣದಲ್ಲಿ ೧೨ನೇ ಸ್ಥಾನದಲ್ಲಿದೆ. ೨೦೦೧ರ ಜನಗಣತಿಯಂತೆ ೬ ತಾಲ್ಲೂಕುಗಳು, ೧೮ ಹೋಬಳಿಗಳು, ೬೨೭ ಗ್ರಾಮಗಳನ್ನು, ೧೨ ಪಟ್ಟಣ ಪ್ರದೇಶಗಳನ್ನು ಒಳಗೊಂಡಿದೆ. ಜಿಲ್ಲೆಯಲ್ಲಿ ಕೃಷ್ಣಾ, ಘಟಪ್ರಭಾ ಮತ್ತು ಮಲಪ್ರಭಾ ಮೂರು ನದಿಗಳು ಹರಿಯುತ್ತವೆ. ಹಾಗೂ ಜಿಲ್ಲೆಯು ಗ್ರಾನೈಟ್ ಗಣಿ ಸಂಪತ್ತಿನಿಂದ ಕೂಡಿದೆ.

### ಕೋಷ್ಟಕ ೧

ಜನಸಂಖ್ಯೆ ಮತ್ತು ಜನಸಾಂದ್ರತೆ ಬಾಗಲಕೋಟೆ ಜಿಲ್ಲೆಯ ಒಟ್ಟು ಜನಸಂಖ್ಯೆ ೧೬೫೧೮೯೨.

| | | |
|---|---|---|
| ಬಾಗಲಕೋಟೆ ಜಿಲ್ಲೆ | ಗಂಡಸರು | ೮೩,೪೨೪೭ |
| | ಹಂಗಸರು | ೮೧,೭೬೪೫ |
| | ಗ್ರಾಮೀಣ | ೧೧,೭೩೩೭೨ |
| | ನಗರ | ೪೨,೮೫೨೦ |
| | ಪ.ಜಾ | ೨೫೦,೬೦೪ |
| | ಪ.ಪಂ. | ೮೦,೧೮೧ |
| | ಒಟ್ಟು | ೧೬೫೧೮೯೨ |

ಜನಸಾಂದ್ರತೆಯ ಪ್ರತಿ ಚ.ಕಿ.ಮೀ ಗೆ ೨೫೧ (೨೦೦೧ರ ಜನಗಣತಿ) ಎಂದು ಅಂದಾಜು ಮಾಡಲಾಗಿದೆ. ದಶಕದ ಬೆಳವಣಿಗೆ ೧೮.೮

**ಮೂಲ:** ೨೦೦೧ರ ಜನಗಣತಿ

**ಕೃಪೆ:** ಬಾಗಲಕೋಟೆ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೭-೨೦೦೮

ಕೋಷ್ಟಕವನ್ನು ಗಮನಿಸಿದರೆ ತಾಲ್ಲೂಕಿನಲ್ಲಿ ಮಹಿಳೆಯರ ಸಂಖ್ಯೆಗಿಂತ ಪುರುಷರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಅದೇ ರೀತಿ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಜನಸಂಖ್ಯೆ ನಗರದ ಜನಸಂಖ್ಯೆಗಿಂತ ಅಧಿಕವಾಗಿದೆ. ಜಿಲ್ಲೆಯಲ್ಲಿ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ ಗಮನಿಸಿದಾಗ, ಪರಿಶಿಷ್ಟ ಪಂಗಡದವರಿಗಿಂತ ಪರಿಶಿಷ್ಟ ಜಾತಿಯ ಜನರ ಸಂಖ್ಯೆ ಅಧಿಕವಾಗಿದೆ. ಅಲ್ಲದೆ ಪರಿಶಿಷ್ಠ ಜಾತಿ ಜನರಲ್ಲಿ ಪಟ್ಟಣದ ಪ್ರದೇಶದಲ್ಲಿ ನೆಲೆನಿಂತಿರುವವರಿಗಿಂತ ಗ್ರಾಮೀಣ ಪ್ರದೇಶದಲ್ಲಿ ನೆಲೆನಿಂತವರ ಸಂಖ್ಯೆಯೇ ಅಧಿಕವಾಗಿದೆ. ಪರಿಶಿಷ್ಟ ಪಂಗಡದ ಜನರಲ್ಲಿ ಕೂಡ ಪಟ್ಟಣ ಪ್ರದೇಶಗಳಲ್ಲಿ ವಾಸವಾಗಿದ್ದವರಿಗಿಂತ ಗ್ರಾಮೀಣ ಪ್ರದೇಶದಲ್ಲಿ ವಾಸವಾದವರ ಸಂಖ್ಯೆ ಅಧಿಕವಾಗಿದೆ. ಜಿಲ್ಲೆಯ ಜನರ ಉದ್ಯೋಗ ಕೃಷಿಯಾಗಿದ್ದು, ದಲಿತರು ಮೂಲ ಉದ್ಯೋಗವನ್ನಾಗಿ ಕೂಲಿಯನ್ನೇ ಅವಲಂಭಿಸಿದ್ದಾರೆ. ಜಿಲ್ಲೆಯ ಸಾಕ್ಷರತೆ ೫೭.೮೧ ಇದ್ದು ಇಲ್ಲಿನ ಪರಿಶಿಷ್ಟ ಜಾತಿ ಮತ್ತು ಪಂಗಡದವರಲ್ಲಿ ಸಾಕ್ಷರತೆ ಕಡಿಮೆ ಇದೆ. ಅದರಲ್ಲೂ ಉನ್ನತ ಮಟ್ಟದ ಶಿಕ್ಷಣದಿಂದ ದಲಿತರು ವಂಚಿತರಾಗಿದ್ದಾರೆ. ಇದರಿಂದಾಗಿ ಇಲ್ಲಿನ ದಲಿತರ ಸ್ಥಿತಿ ಶೋಚನೀಯವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು.

**ಐತಿಹಾಸಿಕ ಹಿನ್ನೆಲೆ**

ಬಾಗಲಕೋಟೆ ಐತಿಹಾಸಿಕ ಹಿನ್ನೆಲೆ ಹೇಳುವುದು ಎಂದರೆ ಬಿಜಾಪುರ ಜಿಲ್ಲೆ ಐತಿಹಾಸಿಕ ಹಿನ್ನಲೆಯಲ್ಲೆ ಹೇಳಬೇಕಾಗುವುದು. ಅವಿಭಜಿತ ಜಿಲ್ಲೆ ಬಿಜಾಪುರ ಕರ್ನಾಟಕ ಚರಿತ್ರೆಯಲ್ಲೇ ಮಹತ್ವದ ಸ್ಥಾನ ಪಡೆದಿದೆ. ಇಲ್ಲಿನ ಇತಿಹಾಸ ಮೌರ್ಯರಿಂದ ಪ್ರಾರಂಭವಾಗುತ್ತದೆ. ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಕಳಚೂರಿಗಳು, ದೇವಗಿರಿಯ ಸೇಉಣರು, ವಿಜಯನಗರ ಸಾಮ್ರಾಜ್ಯವು, ಬಹುಮನಿ ಸಾಮ್ರಾಜ್ಯ, ವಿಜಾಪುರ ಆದಿಲ್‌ಶಾಹಿ ಸಾಮ್ರಾಜ್ಯ, ಮೊಗಲ್ ಹೈದರಾಬಾದ್ ನಿಜಾಮರು, ಹೈದರಾಲಿ-ಟಿಪ್ಪು ಮತ್ತು ಮರಾಠರು ಜಿಲ್ಲೆಯ ಕೆಲವು ಭಾಗಗಳಲ್ಲಿ ಆಳ್ವಿಕೆ ಮಾಡಿದ್ದಾರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಪ್ರಾದೇಶಿಕ ಸಂಸ್ಥಾನಗಳಾದ ಮುಧೋಳ ಸಂಸ್ಥಾನ, ಜಮಖಂಡಿ ಸಂಸ್ಥಾನ, ಸವಣರು ನವಾಬರು, ಸಾಂಗ್ಲಿ ಸಂಸ್ಥಾನ, ಹಿರೇಕುಂದರವಾಡ ಸಂಸ್ಥಾನಗಳು ಈ ಪ್ರದೇಶದಲ್ಲಿ ಸ್ಥಾಪನೆಗೊಂಡು ಹಲವಾರು ವರ್ಷಗಳ ಕಾಲ ಆಳ್ವಿಕೆ ಮಾಡಿ ಕನ್ನಡ ಸಂಸ್ಕೃತಿಗೆ ಅಮೋಘ ಕಾಣಿಕೆ ನೀಡಿವೆ. ಹೆಚ್ಚಾಗಿ ಬಂಡವಾಳಶಾಹಿ ವರ್ಗ, ಜಮೀನ್ದಾರಿಕೆ ವರ್ಗ ಸಹಜವಾಗಿಯೇ ಬೆಳೆದು ಬಂತು. ಇವರು ದಲಿತರನ್ನು ಜೀತದಾಳುಗಳಂತೆ ಇಂದಿಗೂ ದುಡಿಸಿಕೊಳ್ಳುತ್ತಿದ್ದಾರೆ. ಇತಿಹಾಸ ಕಾಲದಿಂದಲೂ ಇಲ್ಲಿನ ದಲಿತರು ಅತ್ಯಂತ ಶೋಷಣೆಗೆ ಒಳಗಾಗಿದ್ದಾರೆ. ಬಸವಣ್ಣ ಜನಿಸಿರುವ ನಾಡೆಂದು ಹೆಮ್ಮೆಯಿಂದ ಹೇಳಿಕೊಳ್ಳುವ ಈ ಜಿಲ್ಲೆಗಳಲ್ಲಿ ಅಸ್ಪೃಶ್ಯತೆ ದೌರ್ಜನ್ಯಕ್ಕೆ ಕೊನೆಯೇ ಇಲ್ಲವಾಗಿದೆ. ಈ ಪ್ರದೇಶದ ದಲಿತರು ಹೆಚ್ಚಾಗಿ ಅನಕ್ಷರಸ್ಥರಾಗಿದ್ದು ಉನ್ನತ ಶಿಕ್ಷಣ ಹೊಂದುವ ಸ್ಥಿತಿಯಲ್ಲಿ ಇವರು ಇಲ್ಲ. ಏಕೆಂದರೆ ಹೆಚ್ಚು ದಲಿತರು ಕೂಲಿಯನ್ನೇ ಅವಲಂಭಿಸಿ ಜೀವನ ಮಾಡುತ್ತಿದ್ದು ಶಿಕ್ಷಣಕ್ಕೆ ಮಹತ್ವ ಕೊಟ್ಟಿಲ್ಲ. ಜಾಗೃತಿ ಇಲ್ಲದ ದಲಿತರನ್ನು ಇಲ್ಲಿನ ಮೇಲ್ವರ್ಗದವರು ಶೋಷಣೆ ಮಾಡುತ್ತಿದ್ದಾರೆ.

ಪ್ರತಿಯೊಂದು ಚಳವಳಿ ಘಟನೆ ಹಾಗೂ ಅದಕ್ಕೆ ಸಂಬಂಧಿಸಿದ ವ್ಯಕ್ತಿಗಳಿಗೂ ಅದರದೆ ಆದ ಚರಿತ್ರೆ ಇದ್ದೇ ಇರುತ್ತದೆ. ಇಂತಹ ಚರಿತ್ರೆಯನ್ನು ಸಂಶೋದನೆಗೆ ಒಳಪಡಿಸಿದಾಗ ಮಹತ್ವದ ವಿಷಯ ಕಂಡುಬರುತ್ತದೆ. ಇಂತಹ ಅಧ್ಯಯನಗಳನ್ನು ಕೆಳಸ್ತರದ ಚರಿತ್ರೆಯ ದೃಷ್ಟಿಯಿಂದ ಪರಿಶೀಲಿಸುವುದು ಅತ್ಯಂತ ಉಪಯುಕ್ತವಾದುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಕೆಳಕಂಡ ಉದ್ದೇಶಗಳನ್ನು ಒಳಗೊಂಡಿರುವುದು.

**೧.೧. ಅಧ್ಯಯನದ ಉದ್ದೇಶ**

ಕರ್ನಾಟಕದ ಸಂದರ್ಭದಲ್ಲಿ ದಲಿತಪರ ಹೋರಾಟಗಳು ಹಾಗೂ ದಲಿತ ಚಳವಳಿಗಳು ಮತ್ತು ಅವುಗಳ ಪೂರಕ-ಪ್ರೇರಕ ಹಿನ್ನೆಲೆಯನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಬಾಗಲಕೋಟೆಯೆಂಬ ಹೊಸ ಜಿಲ್ಲೆ ಅಂದರೆ ವಿಜಾಪುರ ಜಿಲ್ಲೆಯಿಂದ ಆಗಸ್ಟ್ ೧೯೯೭ರಲ್ಲಿ ಬೇರ್ಪಡಿಸಿ ಜಿಲ್ಲೆಯನ್ನಾಗಿ ರಚಿಸಲಾಯಿತು. ಇಲ್ಲಿ ದಲಿತ ಚಳವಳಿಯ ಪೂರ್ವಕ್ಕೂ, ದಲಿತ ಚಳವಳಿಯ ನಂತರವು ನಡೆದ ಹಲವಾರು ಬದಲಾವಣೆಗಳನ್ನು

ಹಾಗೂ ನಿರಂತರತೆಯನ್ನು ಇಲ್ಲಿ ನೋಡಲಾಗುವುದು. ದಲಿತ ಚಳವಳಿ ನಡೆದು ಬಂದ ಹಾದಿಯನ್ನು ಅಧ್ಯಯನ ಮಾಡಲಾಗಿದೆ ಹಾಗೂ ಅವು ತಾಳಿದ ಭಿನ್ನ ಭಿನ್ನ ಸ್ವರೂಪವು ಬಹಳ ಮುಖ್ಯವಾಗುತ್ತದೆ. ಇಲ್ಲಿ ಮೂರು ದಶಕಗಳ ದಲಿತ ಚಳವಳಿಯನ್ನು ಅಧ್ಯಯನಕ್ಕೆ ಒಳಪಡಿಸುವಾಗ ದಲಿತ ಸಂಘಟನೆಗಳ ವಿವಿಧ ಮುಖಗಳು ಬಹುಮುಖ್ಯವಾಗುತ್ತವೆ. ಅವುಗಳನ್ನು ಅಧ್ಯಯನದಲ್ಲಿ ವಿವರಿಸಲಾಗಿದೆ. ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ವಿಭಿನ್ನವಾಗಿ ಒಡೆದುನಿಂತು, ಪ್ರತ್ಯೇಕ ಅಸ್ತಿತ್ವವನ್ನು ಪಡೆದುಕೊಂಡಿರುವುದು, ಪಡೆದುಕೊಳ್ಳುತ್ತಿರುವುದು ಕಂಡುಬರುತ್ತದೆ. ಇವೆಲ್ಲವನ್ನು ತಾತ್ವಿಕ ಚರ್ಚೆಗೆ ಎತ್ತಿಕೊಂಡು ಇಲ್ಲಿ ಚರ್ಚಿಸಲಾಗಿದೆ.

ಆರಂಭದಲ್ಲಿ ರಾಜಕೀಯದಿಂದ ದೂರ ಇದ್ದ ದಲಿತ ಚಳವಳಿ ಕ್ರಮೇಣ ಅನೇಕ ರಾಜಕೀಯ ಸಿದ್ಧಾಂತಗಳಿಗೆ ಪಕ್ಕಾಗಿ ಭಿನ್ನವಾಗುವ ಪ್ರಕ್ರಿಯೆ ಅತ್ಯಂತ ಕುತೂಹಲಕಾರಿಯಾದದ್ದು. ದೇಶದ ರಾಜಕೀಯ ಹಿನ್ನೆಲೆಯಲ್ಲಿ ಈ ಸ್ಥಿತ್ಯಂತರಗಳು ಅತ್ಯಂತ ಮುಖ್ಯವಾಗಿ ಕಂಡುಬರುತ್ತವೆ. ಇವುಗಳನ್ನು ತಾತ್ವಿಕ ನೆಲೆಯಲ್ಲಿ ಗ್ರಹಿಸಲಾಗುವುದು ಮತ್ತು ಜಾಗತಿಕ ವಿದ್ಯಮಾನಗಳಿಂದ ಅರ್ಥಮಾಡಿಕೊಳ್ಳಲಾಗುವುದು. ಇವೆಲ್ಲವುಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿಯ ಹುಟ್ಟು, ಬೆಳವಣಿಗೆಯನ್ನು ಪರಿಶೀಲಿಸುವುದು ಹಾಗೂ ಈ ಜಿಲ್ಲೆಯಲ್ಲಿ ದಲಿತ ಚಳವಳಿಯನ್ನು ಮೊದಲು ಪ್ರಾರಂಭಿಸಿದ ವ್ಯಕ್ತಿ, ಸಂಘಟನೆ, ನಂತರ ಹೋರಾಟದ ಮಾದರಿ ಸ್ವರೂಪ, ಸಫಲತೆ ಹಾಗೂ ವಿಫಲತೆ ಕುರಿತು ಸಮಗ್ರವಾಗಿ ಸಂಶೋಧಿಸಿ ಅಧ್ಯಯನ ಮಾಡುವುದು ಪ್ರಮುಖ ಉದ್ದೇಶವಾಗಿರುತ್ತದೆ. ಏಕೆಂದರೆ ಅನ್ಯಾಯ, ತುಳಿತ, ಶೋಷಣೆ ಎಲ್ಲಿರುತ್ತದೆಯೋ ಅಲ್ಲಿ ಚಳವಳಿ, ಪ್ರತಿಭಟನೆ, ಹೋರಾಟಗಳು ಅನಿವಾರ್ಯವಾಗುತ್ತವೆ. ಆದುದರಿಂದ ಬಾಗಲಕೋಟೆ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿ ಮಾಡುತ್ತಿರುವ ಹೋರಾಟಗಳು ಎಲ್ಲೂ ದಾಖಲಾಗಿರುವುದಿಲ್ಲ. ಶೋಷಣೆ ನಿರಂತರವಾಗಿದ್ದರೂ ಪ್ರತಿಭಟನೆಗಳು ನಡೆದಿರುವುದು ಹಾಗೂ ನಡೆಯುತ್ತಿರುವುದು ಸತ್ಯವಾದರೂ ಅದು ದಾಖಲಾಗದಿದ್ದರೆ ಚರಿತ್ರೆಯಾಗುವುದು ಕಷ್ಟಸಾಧ್ಯ.

೧೯೯೭ ರಲ್ಲಿ ವಿಜಾಪುರದಿಂದ ವಿಭಜನೆಯಾದ ಬಾಗಲಕೋಟೆ ಜಿಲ್ಲೆ ಪ್ರಸ್ತುತ ಆರು ತಾಲ್ಲೂಕುಗಳನ್ನು ಒಳಗೊಂಡಿದೆ. ಜಮಖಂಡಿ, ಬಾಗಲಕೋಟೆ, ಬೀಳಗಿ, ಬಾದಾಮಿ, ಮುಧೋಳ ಹಾಗೂ ಹುನಗುಂದ. ಈ ತಾಲ್ಲೂಕುಗಳಲ್ಲಿ ದಲಿತ ಚಳವಳಿ ಮತ್ತು ದಲಿತ ಸಂಘರ್ಷ ಸಮಿತಿಯ ಸಮಗ್ರ ಕಾರ್ಯನಿರ್ವಹಣೆಯ ಬಗ್ಗೆ ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ. ನಾಯಕತ್ವದ ಕೊರತೆ ದಲಿತ ಚಳವಳಿಯ ಮೂಲ ಪ್ರಶ್ನೆ. ಅಂದು ಅಂಬೇಡ್ಕರ್ ಒಬ್ಬರೇ ಇಡೀ ದಲಿತ ಚಳವಳಿಯ ಸಮರ್ಥ ನಾಯಕರಾಗಿದ್ದರು. ಆಗಿನ ಸಂದರ್ಭದಲ್ಲಿ ದಲಿತ ಚಳವಳಿಗಳು ಬಲಿಷ್ಟವಾಗಿತ್ತು. ಆದರೆ ಇಂದು ಅನೇಕ ನಾಯಕರಿದ್ದು ದಲಿತ ಚಳವಳಿಗಳು ಸೋಲುತ್ತಿವೆ ಎಂಬುದನ್ನು ಈ ಪ್ರಬಂಧದಲ್ಲಿ ಸ್ಥೂಲವಾಗಿ ಚರ್ಚಿಸಲಾಗಿದೆ. ಬಾಗಲಕೋಟೆ

ಜಿಲ್ಲೆಯ ದಲಿತ ಚಳವಳಿಯ ಪ್ರಮುಖ ನಾಯಕರು ಮತ್ತು ಅವರ ಹಿನ್ನೆಲೆ, ಅವರು ತೆಗೆದುಕೊಂಡ ನಿರ್ಣಯಗಳ ಬಗೆಗೆ ಮಾಹಿತಿ ಸಂಗ್ರಹಿಸಿ ದಾಖಲಿಸುವುದು ಹಾಗೂ ದಲಿತ ಸಂಘರ್ಷ ಸಮಿತಿಯಲ್ಲಿ ಅವರ ಪಾತ್ರವೇನು ಎನ್ನುವುದರ ಬಗೆಗೆ ಮುಖಾಮುಖಿಯಾಗುವುದು ಪ್ರಸ್ತುತ ಅಧ್ಯಯನದ ಉದ್ದೇವಾಗಿದೆ. ಅಧ್ಯಯನದಲ್ಲಿ ಸಾಮಾಜಿಕ ನ್ಯಾಯದ ಪರಿಕಲ್ಪನೆ, ದಲಿತರ ಸಮಸ್ಯೆಗಳಿಗೆ, ದುರಂತಗಳಿಗೆ ಸರಕಾರ ಕೊಡುವಂತಹ ತಾತ್ಕಾಲಿಕ ಪರಿಹಾರಗಳು, ದಲಿತ ಚಳವಳಿಗಳನ್ನು ನಿರ್ಲಿಪ್ತಗೊಳಿಸುವುದೆ ಅಥವಾ ಇಲ್ಲವೆ, ಯಾವ ಹಕ್ಕುಗಳಿಗಾಗಿ ದಲಿತ ಹೋರಾಟಗಳು ನಡೆದಿವೆ, ಆ ಹಕ್ಕುಗಳು ದೊರೆತವೇ ಅಥವಾ ಇಲ್ಲವೇ ಎಂಬುವುದರ ಕುರಿತು ಮಾಹಿತಿ ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಇದರ ಜೊತೆಗೆ ಹೋರಾಟದ ಸ್ವರೂಪ ಕುರಿತು ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಭೂ ಹೋರಾಟ, ಅಸ್ಪೃಶ್ಯತೆಯ ವಿರುದ್ಧ ಹೋರಾಟ, ಅತ್ಯಾಚಾರ ಮತ್ತು ಕೊಲೆಪ್ರಕರಣಗಳ ವಿರುದ್ಧ ಹೋರಾಟ, ಕುಡಿಯುವ ನೀರು ಹಾಗೂ ಕೆರೆ ನೀರಿಗಾಗಿ ಹೋರಾಟ ಮುಂತಾದ ಮೂಲಭೂತ ಸೌಕರ್ಯಗಳನ್ನು ಪಡೆದುಕೊಳ್ಳುವಲ್ಲಿ ಜಿಲ್ಲೆಯ ದಲಿತ ಸಂಘಟನೆಗಳು ಯಾವ ರೀತಿ ಹೋರಾಟ ಮಾಡಿವೆ ಎಂಬುದನ್ನು ತಳಸ್ಪರ್ಶಿಯಾಗಿ ಚರ್ಚಿಸಲಾಗಿದೆ.

ಬಾಗಲಕೋಟೆ ಜಿಲ್ಲೆ ದಲಿತ ಚಳವಳಿ ಪ್ರಸ್ತುತ ಸಂದರ್ಭದಲ್ಲಿ ಹೇಗೆ ಕಾರ್ಯನಿರ್ವಹಿಸುತ್ತಿದೆ. ದಲಿತ ಸಂಘರ್ಷ ಸಮಿತಿ ಇಬ್ಬಾಗದ ಹಿನ್ನೆಲೆಯಲ್ಲಿ ನಾಯಕರ ಭಿನ್ನಾಭಿಪ್ರಾಯ ಏನು? ಮುಂತಾದ ವಿಷಯಗಳನ್ನು ದಾಖಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಶಿಕ್ಷಣ ಕ್ಷೇತ್ರಕ್ಕೆ ದಲಿತ ಚಳವಳಿಯ ಪ್ರಾಮುಖ್ಯತೆ ಏನು? ಸ್ಥಳೀಯ ರಾಜಕೀಯ ಪ್ರಭಾವ ಯಾವ ರೀತಿ ಇದೆ. ಅದರ ಪರಿಣಾಮಗಳ ಬಗ್ಗೆ ಚರ್ಚಿಸುವುದು. ದಲಿತ ಸಂಘರ್ಷ ಸಮಿತಿಯಲ್ಲಿನ ಬಣಗಳ ವಿಂಗಡಣೆ ಅವುಗಳ ನಾಯಕರು, ಸಾಧನೆ ಕುರಿತು ಚರ್ಚಿಸಲಾಗಿದೆ.

### ೧.೨. ಅಧ್ಯಯನದ ವಿಧಿ-ವಿಧಾನ ಮತ್ತು ವ್ಯಾಪ್ತಿ

ಬಾಗಲಕೋಟೆ ಜಿಲ್ಲೆಯನ್ನು ಕೇಂದ್ರವಾಗಿರಿಸಿಕೊಂಡು ಈ ಪ್ರದೇಶದ ಕೆಳಸ್ತರದ ಚರಿತ್ರೆಯನ್ನು ವಿಶ್ಲೇಷಣೆ ಮಾಡುವ ಉದ್ದೇಶದಿಂದ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಆದರೂ ಸಹ ಬಿಜಾಪುರ ಜಿಲ್ಲೆಯನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಪ್ರತಿಯೊಂದು ತಾಲ್ಲೂಕು ದಲಿತ ಚಳವಳಿಯಲ್ಲಿ ಗುರುತಿಸಿಕೊಂಡಿದ್ದು ಅವುಗಳ ಮಹತ್ವವನ್ನು ಅಭ್ಯಸಿಸುವುದೇ ಈ ಅಧ್ಯಯನದ ಪ್ರಮುಖ ವಿಷಯವಾಗಿರುತ್ತದೆ. ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ದಲಿತ ಚಳವಳಿಯ ಅಧ್ಯಯನ ಮಾಡಲಾಗುವುದು. ದಲಿತ ಚಳವಳಿಗೆ ಸಂಬಂಧಪಟ್ಟ ಮಹತ್ವವೆನಿಸಿದ ವಿಷಯಗಳನ್ನು ಮತ್ತು ಆ ಪ್ರದೇಶಗಳಲ್ಲಿ ಕಂಡುಬರುವ ದಲಿತ ಸಂಬಂಧಿತ ಘಟನೆಗಳನ್ನು ಮಾತ್ರ ಅಧ್ಯಯನವು ಒಳಗೊಂಡಿದೆ. ಪ್ರಸ್ತುತ ಅಧ್ಯಯನಕ್ಕೆ ಪ್ರಾಥಮಿಕ ಆಕರವಾಗಿ ಸಂಘ-ಸಂಸ್ಥೆಗಳ ಕರಪತ್ರಗಳು, ದಿನ ಪತ್ರಿಕೆಗಳು, ನಿಯತಕಾಲಿಕೆಗಳನ್ನು ಹೆಚ್ಚಾಗಿ ಈ ವಿಷಯವು ಕ್ಷೇತ್ರಕಾರ್ಯದ

ವ್ಯಾಪ್ತಿಯನ್ನು ಹೊಂದಿರುವುದರಿಂದ ತಾಲ್ಲೂಕು ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಲಿತ ಸಂಘರ್ಷ ಸಮಿತಿಯ ಎಲ್ಲಾ ಬಣಗಳ ಮುಖಂಡರನ್ನು ಭೇಟಿಮಾಡಿ ಮಾಹಿತಿ ಸಂಗ್ರಹಿಸಿ ಮಾಹಿತಿ ಪಡೆಯಲಾಗಿದೆ. ಒಂದಾದರೆ, ಸಂಘಟನೆಗಾಗಿ ಹೋರಾಡಿದ ಹಿರಿಯ ಚಳವಳಿಗಾರರನ್ನು ಭೇಟಿ ಮಾಡಿ ಮಾಹಿತಿ ಸಂಗ್ರಹಿಸಿ ಸಂಪ್ರಬಂಧ ರಚಿಸಲಾಗಿದೆ. ಸರ್ಕಾರಿ ಹಾಗೂ ಖಾಸಗಿ ಗ್ರಂಥಾಲಯಗಳು, ವಿಶ್ವಕೋಶಗಳು, ಗ್ಯಾಸೆಟಿಯರ್‌ಗಳು, ನಿಘಂಟುಗಳು, ಪತ್ರಿಕೆಗಳು ಮುಂತಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಹೀಗೆ ಸಂಗ್ರಹಿಸಿದ ಮಾಹಿತಿ ವಿವರಗಳನ್ನು ವೈಜ್ಞಾನಿಕವಾಗಿ ವರ್ಗೀಕರಿಸಿಕೊಂಡು ಚರಿತ್ರೆಯ ಶಿಸ್ತಿನ ವಿಧಿ-ವಿಧಾನಗಳ ಮೂಲಕ ಪರೀಕ್ಷಿಸಿ, ವಿಶ್ಲೇಷಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

### ಇಲ್ಲಿಯವರೆಗೆ ಆಗಿರುವ ಅಧ್ಯಯನ

ಚರಿತ್ರೆಯನ್ನು ನೋಡುವ ದೃಷ್ಟಿ ಬದಲಾಗಿದೆ. ಹಿಂದೆ ನಡೆದಿರುವ ಚರಿತ್ರೆಯನ್ನು ಮತ್ತೆ ಸಂಶೋಧನೆಗೆ ಒಳಪಡಿಸಿ ವಿಮರ್ಶಿಸಿ ನೋಡಲಾಗುತ್ತಿದೆ. ಆದ್ದರಿಂದ ಸ್ಥಳೀಯ ಚರಿತ್ರೆ, ಮೌಖಿಕ ಚರಿತ್ರೆ, ಸಬಾಲ್ಟರ್ನ್ ಚರಿತ್ರೆ ಎಂದು ಹೊಸ-ಹೊಸ ಆಯಾಮಗಳಿಂದ ಇತಿಹಾಸವನ್ನು ನೋಡಲಾಗುತ್ತಿದೆ. ಆದರೂ ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಯಾವುದೇ ಸಂಶೋಧನಾತ್ಮಕ ಪ್ರಬಂಧ ಹೊರಬಂದಿರುವುದಿಲ್ಲ. ಆದರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಕೃತಿಗಳು ಪ್ರಕಟವಾಗಿವೆ. ಅವುಗಳು ಶಿವಾನಂದ ಶೆಲ್ಲಿಕೇರಿ ಅವರು ರಚಿಸಿರುವ 'ಬಾಗಲಕೋಟೆ ಜಿಲ್ಲೆ ಜನಪದ ಕಲಾವಿದರು' ಎಂಬ ಕೃತಿ ಬಹುಮುಖ್ಯವಾದದ್ದು ಹಾಗೂ ಬಿ.ಆರ್. ಪೊಲೀಸ್ ಪಾಟೀಲ ಅವರು ರಚಿಸಿರುವ 'ಬಾಗಲಕೋಟೆ ನಾಟಕ' ಎಂಬ ಕೃತಿಯು ಮುಖ್ಯವಾದದ್ದು ಮತ್ತು 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು' ಮಾತ್ರ ಪ್ರಕಟವಾಗಿವೆ. ಈ ಹಿನ್ನೆಲೆಯಲ್ಲಿ ''ಬಾಗಲಕೋಟೆ ಜಿಲ್ಲೆಯ ದಲಿತ ಚಳುವಳಿ : ಒಂದು ಅವಲೋಕನ'' ಎಂಬ ವಿಷಯ ಕುರಿತು ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

### ೧.೩. ಅಧ್ಯಯನದ ಪ್ರಾಮುಖ್ಯತೆ ಮತ್ತು ಸ್ವರೂಪ

ಎಲ್ಲಾ ಚಳವಳಿಗಳಿಗೂ ಇರುವಂತೆ ದಲಿತ ಚಳವಳಿಯು ವಿಶಿಷ್ಟವಾದ ಸ್ವರೂಪ ಹೊಂದಿದೆ. ಇದಕ್ಕೆ ಇಂದಿನ ಸಾಮಾಜಿಕ ಸಂದರ್ಭವೇ ಮೂಖ ಸಾಕ್ಷಿಯಾಗಿದೆ. ಸಾಮಾಜಿಕ ಕಟ್ಟುಪಾಡುಗಳ ವಿರುದ್ಧ ಸಂವಿಧಾನಿಕ ಶಿಸ್ತು ಏನೆಲ್ಲಾ ಇದ್ದರೂ ಸಹ ಇವುಗಳು ಜಾರಿಗೊಳ್ಳುವಲ್ಲಿ ಆಗಿರುವ ತೊಡಕು ಹಾಗೂ ಉನ್ನತ ಸಮಾಜದವರೆಂದು ಹೇಳಿಕೊಳ್ಳುವ ಭಾವನೆಗಳ ವಿರುದ್ಧ ನಡೆಸಿದ ಹೋರಾಟಗಾರರು ಒಂದು ಕಡೆಯಾದರೆ, ಯುವ ದಲಿತ ಹೋರಾಟಗಾರರು ಹಿರಿಯ ಚಿಂತಕರು ಹಾಗೂ ಹೋರಾಟಗಾರರ ಜೊತೆಗೂಡಿ ಜಿಲ್ಲೆಯಲ್ಲಿ ನಡೆದಿರುವ ಚಳವಳಿಯ ಸಮಗ್ರ ಅಧ್ಯಯನ ನಡೆಸುವುದು ಪ್ರಮುಖವಾಗಿರುತ್ತದೆ.

**ಅಡಿ ಟಿಪ್ಪಣಿಗಳು**

೧. ಚಿನ್ನಸ್ವಾಮಿ ಸೋಸಲೆ ಎನ್. ೨೦೦೮, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪

೨. ಚಿನ್ನಸ್ವಾಮಿ ಸೋಸಲೆ ಎನ್. ೨೦೦೮, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೮

೩. ಚಿನ್ನಸ್ವಾಮಿ ಸೋಸಲೆ ಎನ್. ೨೦೦೮, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯

೪. ಮುನಿವೆಂಕಟಪ್ಪ ವಿ., ೧೯೯೮, ದಲಿತ ಚಳುವಳಿ ಒಂದು ಅವಲೋಕನ, ವಿಚಾರವಾದಿ ಪ್ರಕಾಶನ, ಮೈಸೂರು, ಪು.೩

೫. ವಿರೂಪಾಕ್ಷಿ ಪೂಜಾರಹಳ್ಳಿ, (ಸಂ), ೨೦೦೫, ದಲಿತರು ಮತ್ತು ಚರಿತ್ರೆ, (ಲೇ) ಚೆನ್ನಣ್ಣವಾಲಿಕಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪು.೧೫

೬. ಬಾಗಲಕೋಟೆ ಅಂಕಿ-ಅಂಶಗಳ ನೋಟ, ೨೦೦೭-೦೮

* * *

ಅಧ್ಯಾಯ ಎರಡು

# ದಲಿತ ಚಳವಳಿ ಸ್ಥಿತಿ-ಗತಿ

೨.೧. ಬಾಗಲಕೋಟೆ ಜಿಲ್ಲೆಯಲ್ಲಿ ದಲಿತ ಚಳವಳಿಯ ಉದಯ ಹಾಗೂ ಬೆಳೆದುಬಂದ ದಾರಿ

೨.೨. ದಲಿತ ಚಳವಳಿಯ ಪ್ರಮುಖ ವ್ಯಕ್ತಿಗಳು

# ಅಧ್ಯಾಯ ಎರಡು

## ದಲಿತ ಚಳವಳಿ ಸ್ಥಿತಿ-ಗತಿ

ಭಾರತೀಯ ಚರಿತ್ರೆಯಲ್ಲಿ ದಲಿತರು ಸಾವಿರಾರು ವರ್ಷಗಳಿಂದ ಶೋಷಣೆಗೆ ಒಳಗಾಗಿದ್ದಾರೆ. ಇಂಥ ಶೋಷಣೆ ವಿರುದ್ಧ ಚಳವಳಿ ಪ್ರಾರಂಭವಾಗಿದ್ದು ಇತ್ತೀಚಿನ ಬೆಳವಣಿಗೆಯೇನಲ್ಲ. ಪ್ರಾಯಶಃ ಹನ್ನೆರಡನೇ ಶತಮಾನದ ಹಿಂದಿನ ಚರಿತ್ರೆ ದಲಿತ ಚಳವಳಿಗೆ ಇದೆ. ಬುದ್ಧ, ಬಸವಾದಿ ಶರಣರು ಸಾಮಾಜಿಕ ಸಮಾನತೆಗಾಗಿ ಪಟ್ಟ ಶ್ರಮದಲ್ಲಿ ದಲಿತ ಚಳವಳಿಯ ಲಕ್ಷಣಗಳನ್ನು ಕಾಣುತ್ತೇವೆ. ಸ್ವಾತಂತ್ರ್ಯ ಪೂರ್ವದಲ್ಲೇ ದಲಿತ ಚಳವಳಿ ಹುಟ್ಟಿಕೊಂಡಿದ್ದು, ಅನೇಕ ಸಮಾಜ ಸುಧಾರಕರು ಈ ನಿಟ್ಟಿನಲ್ಲಿ ಶ್ರಮಿಸಿದ್ದಾರೆ. ಮಹಾರಾಷ್ಟ್ರದ ಜ್ಯೋತಿಬಾಫುಲೆ, ಅಂಬೇಡ್ಕರ್, ಶಾಹುಮಹಾರಾಜ, ಕೇರಳದ ನಾರಾಯಣ ಗುರು, ತಮಿಳುನಾಡಿನ ಪೆರಿಯಾರ್ ರಾಮಸ್ವಾಮಿ, ಕರ್ನಾಟಕದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ದಲಿತರ ಏಳಿಗೆಗಾಗಿ ದುಡಿದವರು. ಮಹಾರಾಷ್ಟ್ರದಲ್ಲಿ ಹುಟ್ಟಿದ ಫುಲೆ ಅವರು ಬ್ರಾಹ್ಮಣಶಾಹಿ ವಿರುದ್ಧ ಸಿಡಿದೆದ್ದು, ಅಸ್ಪೃಶ್ಯರು ಗುಲಾಮಗಿರಿಯಿಂದ ಮುಕ್ತರಾಗಬೇಕಾದರೆ ಅಕ್ಷರ ಜ್ಞಾನದ ಅಗತ್ಯವಿದೆ ಎಂದರು. ಹಾಗಾದರೆ ಮಾತ್ರ ಅಸ್ಪೃಶ್ಯರು ನಾಗರಿಕ ಸಮಾಜದ ಬೆಳಕನ್ನು ಕಾಣಲು ಸಾಧ್ಯವೆಂಬುದನ್ನು ಮನಗಂಡು ೧೮೫೧ರಲ್ಲಿ ಅಸ್ಪೃಶ್ಯ  ಬಾಲಕಿಯರಿಗಾಗಿ ಶಾಲೆ ಆರಂಭಿಸಿ 'ಜ್ಞಾನವೇ ಬಲ'ವೆಂಬ ತತ್ವವನ್ನು ಪರಿಣಾಮಕಾರಿಯಾಗಿ ತಿಳಿಸಿದರು. ಸತ್ಯಶೋಧಕ ಸಮಾಜ ಸ್ಥಾಪಿಸುವ ಮೂಲಕ ದಲಿತೋದ್ಧಾರ ಕಾರ್ಯಮಾಡಿದರು. ಫುಲೆ ಮತ್ತು ಅಂಬೇಡ್ಕರ್ ವಿಚಾರಗಳು ಮುಂಬೈ ಕರ್ನಾಟಕದ ಭಾಗಗಳಲ್ಲಿ ಪ್ರಭಾವ ಬೀರಿವೆ. ಅದು ವಿಶೇಷವಾಗಿ ಬೆಳಗಾವಿ ಜಿಲ್ಲೆಯಲ್ಲಿ ಇವರ ವಿಚಾರಗಳು ದಲಿತರಲ್ಲಿ ಒಗ್ಗಟ್ಟು ಮೂಡಲು ಕಾರಣವಾಯಿತು. ಈ ನಿಟ್ಟಿನಲ್ಲಿ ಬಲವಂತರಾವ್ ವರಾಳೆ, ದೇವರಾಯ ಇಂಗಳೆ, ಎಂ.ಬಿ.ನಾಡಕರ್ಣಿ ಮೊದಲಾದವರು ದಲಿತ ಸಂಘಟನೆ ಕಟ್ಟಿ ೧೯೨೪ರ ಹೊತ್ತಿಗೆ ಬೆಳಗಾವಿ ಜಿಲ್ಲೆಯಾದ್ಯಂತ ದಲಿತ ಚಳವಳಿ ವಿಸ್ತರಿಸಿತ್ತು. ಅಂಬೇಡ್ಕರ್ ಅವರು ತಮ್ಮ ಚಳವಳಿಯನ್ನು ಆರಂಭಿಸುವುದಕ್ಕಿಂತ ಮೊದಲೇ ದಕ್ಷಿಣ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಅಸ್ಪೃಶ್ಯತೆ ವಿರುದ್ಧ ಚಳವಳಿ[1] ಹುಟ್ಟಿಕೊಂಡಿದ್ದವು.

## ದಲಿತ ಚಳವಳಿಗೆ ಪ್ರಭಾವ ಬೀರಿದ ಚಿಂತಕರು

ಕೊಲ್ಹಾಪುರದ ಶಾಹುಮಹಾರಾಜರು ಫುಲೆಯವರ ಸತ್ಯಶೋಧಕ ಸಮಾಜದ ಚಳವಳಿಯನ್ನು ಮುಂದುವರಿಸಿ ತಮ್ಮ ಆಡಳಿತಾವಧಿಯಲ್ಲಿ ದೇಶದಲ್ಲಿಯೇ ಪ್ರಥಮವಾಗಿ ೧೯೦೨ರಲ್ಲಿ ಶೇ.೫೦ ರಷ್ಟು ಮೀಸಲಾತಿಯನ್ನು ಶೂದ್ರ, ಅತಿಶೂದ್ರರಿಗಾಗಿ ಜಾರಿಗೆ ತಂದರು. ವಿಧವಾ ವಿವಾಹ ಕಾಯಿದೆ, ಅಸ್ಪೃಶ್ಯತೆ ನಿಷೇಧ, ದೇವದಾಸಿಯಂತಹ ಅನಿಷ್ಟ ಪದ್ಧತಿಯನ್ನು ನಿರ್ಮೂಲನ ಮಾಡುವ ಕಾಯಿದೆಗಳನ್ನು ಜಾರಿ ಮಾಡಿ ಸಾಮಾಜಿಕ ಪರಿವರ್ತನೆ ನೆಲೆಯಲ್ಲಿ ಸುಧಾರಣಾ ಕ್ರಮಗಳನ್ನು ಕೈಗೊಂಡರು. ಶಾಹು, ಫುಲೆ, ಅಂಬೇಡ್ಕರ್ ಅವರಂಥ ಸಮಾಜ ಸುಧಾರಕರ ಸಾಲಿನಲ್ಲಿ ಕೇರಳದ ನಾರಾಯಣ ಗುರು ಒಬ್ಬರು. ಕೇರಳದ ಅಸ್ಪೃಶ್ಯರ ವರ್ಗಕ್ಕೆ ಆಗುತ್ತಿರುವ ದೌರ್ಜನ್ಯದ ವಿರುದ್ಧ ವಿನೂತನ ಚಳವಳಿ ಆರಂಭಿಸಿದರು. ಸ್ವತಃ ದೇವಾಲಯಗಳ ನಿರ್ಮಾಣ ಮಾಡಿ ಶೂದ್ರಾತಿ ಶೂದ್ರರಿಗೆ ದೇವಸ್ಥಾನದಲ್ಲಿ ಪ್ರವೇಶ ಕಲ್ಪಿಸಿ ದೇವಾಲಯಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ನಿರಾಕರಿಸಿದ ಸ್ಪೃಶ್ಯರಿಗೆ ತಕ್ಕ ಪಾಠ ಕಲಿಸಿ ಸಾಮಾಜಿಕ ಪರಿವರ್ತನೆಗೆ ನಾಂದಿ ಹಾಡಿದರು. ಈ ಚಳವಳಿಯಿಂದ ಪ್ರಭಾವಿತರಾದ ಪೆರಿಯಾರ್ ರಾಮಸ್ವಾಮಿ ''ಜಸ್ಟಿಸ್ ಪಾರ್ಟಿ'' (೧೯೧೫) ಸ್ಥಾಪಿಸುವ ಮೂಲಕ ತಮಿಳು ರಾಜ್ಯದಲ್ಲಿ ಬ್ರಾಹ್ಮಣೇತರ ಚಳವಳಿಗೆ ಚಾಲನೆ ನೀಡಿದರು. ವೈಧಿಕ ಸಂಸ್ಕೃತಿಯ ವಿರುದ್ಧ ಸ್ವಾಭಿಮಾನದ ನೆಲೆಯನ್ನು ದ್ರಾವಿಡರಲ್ಲಿ ಬೆಳೆಸಿದರು. ಸಾಮಾಜಿಕ ಬದಲಾವಣೆಯ ಹೋರಾಟವನ್ನು ಸಮರ್ಥವಾಗಿ ನಿಭಾಯಿಸಿ ಅಸ್ಪೃಶ್ಯತೆ ನಿವಾರಣೆ ಮಾಡುವಲ್ಲಿ ಅವಿರತವಾಗಿ ದುಡಿದ ನೇತಾರ ಈ. ವಿ.ರಾಮಸ್ವಾಮಿ ಎನ್ನಬಹುದು.

## ನಾಲ್ವಡಿ ಕೃಷ್ಣರಾಜ ಒಡೆಯರ ಪ್ರಭಾವ

ಪೆರಿಯಾರ್ ಮತ್ತು ಶಾಹು ಅವರ ಹೋರಾಟಗಳಿಂದ ಮೈಸೂರು ಸಂಸ್ಥಾನದ ನಾಲ್ವಡಿ ಕೃಷ್ಣರಾಜ ಒಡೆಯರು ಪ್ರಭಾವಿತರಾಗಿ ದಲಿತಪರ ಕಾಳಜಿ ಉಳ್ಳವರಾಗಿದ್ದರು. ದಲಿತರಿಗಾಗಿ ಹಲವಾರು ಸುಧಾರಣ ಕಾನೂನುಗಳನ್ನು ಅನುಷ್ಠಾನಗೊಳಿಸಿ ದಲಿತರ ಉದ್ಧಾರಕ್ಕಾಗಿ ವೈಧಿಕರ ವಿರೋಧದ ನಡುವೆಯೂ ಅಸ್ಪೃಶ್ಯರಿಗಾಗಿ ಶಾಲಾ-ಕಾಲೇಜುಗಳನ್ನು ಪ್ರಾರಂಭಿಸಿ ವಿದ್ಯಾರ್ಥಿ ವೇತನ ನೀಡಿ ಪ್ರೋತ್ಸಾಹಿಸುವುದರ ಮೂಲಕ ಪ್ರತಿ ತಾಲ್ಲೂಕಿನಲ್ಲಿಯೂ ವಿದ್ಯಾರ್ಥಿ ವಸತಿ ನಿಲಯ ತೆರೆದು ದಲಿತರ ಶಿಕ್ಷಣಕ್ಕಾಗಿ ಅವಿರತ ದುಡಿದವರು ನಾಲ್ವಡಿ ಕೃಷ್ಣರಾಜ ಒಡೆಯರ್. ಅಂಬೇಡ್ಕರ್ ಅವರು ಕೈಗೊಂಡ ಸಾಮಾಜಿಕ ಹೋರಾಟಕ್ಕೆ ಸೂಕ್ತ ಬೆಂಬಲ ನೀಡುವುದರೊಂದಿಗೆ ಸಾಮಾಜಿಕ ಸಮಾನತೆಯ ಹರಿಕಾರರ ಸಾಲಿಗೆ ಸೇರಿದರು. ಈ ನಿಟ್ಟಿನಲ್ಲಿ ದಲಿತರಿಗಾಗಿ ಕೆಲಸ ಮಾಡಿದ ಬ್ರಾಹ್ಮಣರಾದ ಗೋಪಾಲಸ್ವಾಮಿ ಅಯ್ಯರ್ ಮತ್ತು ಗೋವಿಂದಾಚಾರ್ಯ ಅವರ ಸಾಧನೆ ಮರೆಯುವಂತಿಲ್ಲ. ಅಯ್ಯರ್ ಅವರು ಪಂಚಮರಿಗಾಗಿ ಸಲ್ಲಿಸಿದ ಸೇವೆಗಳು ಹಲವು ಬಗೆಯವು. ಪಂಚಮರ ಶಿಕ್ಷಣಕ್ಕೆ ಮೊದಲ ಆಧ್ಯತೆ ನೀಡಿ ವಿದ್ಯಾರ್ಥಿನಿಲಯಗಳ ಸ್ಥಾಪನೆ ಹಿನ್ನೆಲೆಯಲ್ಲಿ ಇವರ ಪ್ರಭಾವವಿದ್ದಿತು. ೧೯೨೦ರಲ್ಲಿ ''ಆದಿ ಕರ್ನಾಟಕ ಸಂಘ'' ಮತ್ತು ''ಆದಿ ದ್ರಾವಿಡ ಸಂಘಗಳು'' ಅಸ್ತಿತ್ವಕ್ಕೆ ಬಂದಿದ್ದು ಇವುಗಳಲ್ಲಿ ಬಹುತೇಕ ಸದಸ್ಯರು ದಲಿತೇತರರೇ ಆಗಿದ್ದರು. ಇವೆರಡೂ ಸಂಘಟನೆಗಳ ಮೂಲಕ ದಲಿತರಿಗೆ

ಶಾಲೆಗಳಿಗೆ ಪ್ರವೇಶ, ಕೆರೆ ನೀರಿನ ಬಳಕೆಗೆ ಅವಕಾಶ, ದೇವಾಲಯಗಳ ಪ್ರವೇಶ ಇತ್ಯಾದಿ ಕಾರ್ಯಕ್ರಮಗಳನ್ನು ಅಯ್ಯರ್ ಹಮ್ಮಿಕೊಂಡರು.[೨] ಗೋವಿಂದಾಚಾರ್ಯ ಅವರು ಪರಿಶಿಷ್ಟ ಜಾತಿಗಳಲ್ಲಿ ಒಂದಾದ ಕಣಿಯ ಜಾತಿಯ ಸಾಮಾಜಿಕ ಸುಧಾರಣೆಗಳಿಗೆ ಪ್ರಯತ್ನಿಸಿದರು. ಕಣಿಯರನ್ನು 'ಉತ್ತಮ ಹಿಂದುಗಳನ್ನಾಗಿ ಪರಿವರ್ತಿಸುವ' ಪ್ರಯತ್ನ ಅವರದಾಗಿತ್ತು. ಈ ಪ್ರಯತ್ನದ ಫಲವಾಗಿ ೧೯೨೬ರಲ್ಲಿ 'ಕಣಿಯರ ಸಂಘ' ಬೆಂಗಳೂರಿನಲ್ಲಿ ಅಸ್ತಿತ್ವಕ್ಕೆ ಬಂದಿತು.[೩]

## ಬಿ.ಆರ್. ಅಂಬೇಡ್ಕರ್ ಪ್ರಭಾವ

ಈ ದಿಸೆಯಲ್ಲಿ ದಲಿತ ಸಂಘಟನೆಗೆ ಪ್ರಭಾವ ಬೀರಿರುವ ದಾರ್ಶನಿಕರು, ಚಿಂತಕರು, ಸಮಾಜ ಸುಧಾರಕರು, ಜನರ ಮನದಲ್ಲಿ ಅವರ ತತ್ವ ಸಿದ್ಧಾಂತಗಳ ಬೀಜ ಬಿತ್ತಿ ಬೆಳೆಸುವಲ್ಲಿ ಸಫಲರಾಗಿದ್ದಾರೆ. ಕರ್ನಾಟಕದಲ್ಲಿ ದಲಿತ ಚಳವಳಿ ಹುಟ್ಟಿನ ಹಿನ್ನೆಲೆಯಲ್ಲಿ ಮುಂಬಯಿ ಕರ್ನಾಟಕ ಮತ್ತು ಮೈಸೂರು ಸಂಸ್ಥಾನದ ಪಾತ್ರ ಬಹಳ ಪ್ರಮುಖವಾದುದು. ೧೯೨೪ರಲ್ಲಿ ಅಂಬೇಡ್ಕರ್ ಚಳವಳಿ ಆರಂಭಗೊಳ್ಳುವ ಮೊದಲೇ ಉತ್ತರ ಕರ್ನಾಟಕ ಭಾಗದಲ್ಲಿ ದೇವರಾಯ ಇಂಗಳೆ ಅವರ ಸಾಧನೆಗಳಿಂದ ದಲಿತ ಚಳವಳಿ ಜಾಗೃತ ಸ್ಥಿತಿಯಲ್ಲಿತ್ತು. ೧೯೨೪ರಲ್ಲಿ ''ಬಹಿಷ್ಕೃತ ಹಿತಕಾರಿಣಿ ಸಭಾ'' ಪ್ರಾರಂಭಿಸಿದ ಅಂಬೇಡ್ಕರ್ ಇದೊಂದು ಶೋಷಿತ ವರ್ಗಗಳ, ಶೋಷಿತ ವರ್ಗಗಳಿಂದ ಮತ್ತು ಶೋಷಿತ ವರ್ಗಗಳಿಗಾಗಿ ರಚನೆಯಾಗಿರುವ ಸಂಸ್ಥೆ. ಇದರ ಗುರಿ ಶೋಷಿತರನ್ನು ಶೋಷಣೆಯಿಂದ ವಿಮುಕ್ತಿಗೊಳಿಸಿ ಸಾಮಾಜಿಕ, ರಾಜಕೀಯ ಸಮಾನತೆಯನ್ನು ಗಳಿಸುವ ಮೂಲಕ ಅವರ ಆರ್ಥಿಕ ಸುಧಾರಣೆಗೆ ಉತ್ತೇಜನ ನೀಡುವುದಾಗಿದೆ ಎಂದು ಘೋಷಣೆ ಮಾಡಿದರು.[೪] ಮೈಸೂರು ಪ್ರಾಂತ್ಯದಲ್ಲಿ ನಾಯಕತ್ವವಿಲ್ಲದೆ ಮುಂದುವರಿದ ದಲಿತ ಚಳವಳಿ ಅಂಬೇಡ್ಕರ್ ಮತ್ತು ಫುಲೆ ಅವರ ಪ್ರಭಾವದಿಂದ ಬೆಳೆಯಿತು ಎಂಬುದರಲ್ಲಿ ಎರಡು ಮಾತಿಲ್ಲ. ಬೆಳಗಾವಿ, ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಅಂಬೇಡ್ಕರ್ ಅವರು ಸಂಚರಿಸಿ ದಲಿತ ಚಳವಳಿ ಹೋರಾಟಗಾರರಲ್ಲಿ ಉತ್ಸಾಹ ಮೂಡಿಸಿದರು. ಸ್ಥಳೀಯ ನಾಯಕರ ಕೊರತೆ ಎದುರಿಸುತ್ತಿದ್ದರೂ ಈ ಭಾಗದಲ್ಲಿ ಚಳವಳಿಯ ಕಾವು ಕಡಿಮೆಯೇನಿರಲಿಲ್ಲ. ಇದರಿಂದಾಗಿ ಮಹಾರಾಷ್ಟ್ರ ಮಾದರಿಯ ಹೋರಾಟಗಳು ಈ ಭಾಗದಲ್ಲಿ ಹೆಚ್ಚು ಕಂಡುಬರುತ್ತವೆ. ದಲಿತ ವರ್ಗದ ಸಾಮಾಜಿಕ ಸ್ವಾತಂತ್ರ್ಯ ರಕ್ಷಣೆ, ಕಾನೂನು ರಚನೆ, ಆರ್ಥಿಕ ಸ್ಥಿತಿ ಸುಧಾರಣೆಗಾಗಿ ಬೀಳು ಭೂಮಿಯ ಹಂಚಿಕೆ, ಸರಕಾರಿ ನೌಕರಿಗಳಲ್ಲಿ ಪ್ರಾತಿನಿಧ್ಯ ಮೊದಲಾದವುಗಳನ್ನು ಒತ್ತಾಯಿಸಿ ಬೆಳಗಾವಿ ಜಿಲ್ಲಾ ದಲಿತ ಜಾಗೃತಿ ಕಾರ್ಯಕ್ರಮಗಳು, ಪ್ರತಿಭಟನೆಗಳು ನಡೆದು ಬಂದವು. ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರದಲ್ಲಿ ಮುಂಬಯಿ ಕರ್ನಾಟಕ ಮತ್ತು ಮೈಸೂರು ಪ್ರಾಂತ್ಯಗಳಲ್ಲಿ ದಲಿತ ಚಳವಳಿ ಕಂಡುಬಂದಿರುವುದನ್ನು ಕಾಣಬಹುದಾಗಿದೆ.

ಉತ್ತರ ಕರ್ನಾಟಕದ ಭಾಗದಲ್ಲಿ ಎಪ್ಪತ್ತರ ದಶಕದವರೆಗೂ ದೇವರಾಯ ಇಂಗಳೇ ಅವರೇ ದಲಿತ ಚಳವಳಿಯ ನೇತಾರರಾಗಿದ್ದದು ಕಂಡುಬರುತ್ತದೆ. ಇಲ್ಲಿಯೂ ಸಹ ೧೯೬೨ರ ಚುನಾವಣೆ ವೇಳೆಗೆ ಚಿಕ್ಕೋಡಿಯನ್ನು ಮೀಸಲು ಕ್ಷೇತ್ರವಾಗಿ ಘೋಷಿಸಿದ ಪರಿಣಾಮವಾಗಿ ದಲಿತ ಚಳವಳಿಯಲ್ಲಿ ಬಿರುಕು

ಕಂಡಿತು. ೧೯೭೩ರ ಹೊತ್ತಿಗೆ ದಲಿತ ಚಳವಳಿ ಇನ್ನಷ್ಟು ಇಳಿಮುಖವಾಯಿತು. ಆದರೆ ೧೯೮೨ರಲ್ಲಿ ದಲಿತ ಸಂಘರ್ಷ ಸಮಿತಿ ಶಾಖೆ ಆರಂಭವಾಗಿ ಮತ್ತೆ ಹೋರಾಟಗಳಿಗೆ ಸಿದ್ಧವಾಯಿತು. ಗುಲ್ಬರ್ಗಾದಲ್ಲಿ ೧೯೬೮ರಲ್ಲಿ ಹುಟ್ಟಿಕೊಂಡ 'ಭೀಮಸೇನಾ' ಸಂಘಟನೆ ಬಗ್ಗೆ ಹೇಳಲೇಬೇಕು. ಬಿ.ಶ್ಯಾಮಸುಂದರ ಇದರ ಸ್ಥಾಪಕರಾಗಿದ್ದು ದೇಶಾದ್ಯಂತ ತಮ್ಮ ಪ್ರಭಾವವನ್ನು ಬೀರಿದರು. ದಲಿತರಿಗೆ ತರಬೇತಿ ನೀಡುವುದರ ಮುಖಾಂತರ ಸ್ವಯಂ ರಕ್ಷಣೆಗೆ ತಯಾರಿಸಿದರು. ಈ ಸಂಘಟನೆ ಹಿಂಸೆಯನ್ನು ಹಿಂಸೆಯಿಂದಲೇ ಎದುರಿಸಬೇಕೆಂದು ಘೋಷಿಸಿತು.[೫] ಇದರಿಂದಾಗಿ ಹೈದ್ರಾಬಾದ್ ಕರ್ನಾಟಕದಲ್ಲಿ ಗಲಭೆ ಉಂಟಾಗಿ ಕರ್ನಾಟಕ ಸರಕಾರ ಇದನ್ನು ನಿಷೇಧಿಸಿತು. ಇದು ಪ್ರಮುಖವಾಗಿ ದಕ್ಷಿಣದ ಮೂರು ರಾಜ್ಯಗಳಾದ ಆಂಧ್ರ, ಕರ್ನಾಟಕ ಹಾಗೂ ಮಹಾರಾಷ್ಟ್ರಗಳಲ್ಲಿ ಚಟುವಟಿಕೆಯಲ್ಲಿತ್ತು.

ಕರ್ನಾಟಕದಲ್ಲಿ ದೇವರಾಜ ಅರಸು ಮುಖ್ಯಮಂತ್ರಿಗಳಾಗಿದ್ದಾಗ, ಎಲ್.ಜಿ.ಹಾವನೂರ ಅವರು ಮಂಡಿಸಿದ ವರದಿ (೧೯೭೫) ಜಾರಿಗಾಗಿ ಅಂಬೇಡ್ಕರ್ ಜನ್ಮದಿನದಂದು ನಡೆಸಿದ ಆಂದೋಲನದಿಂದಾಗಿ ದಲಿತ ಬುದ್ಧಿ ಜೀವಿಗಳೆಲ್ಲ ಒಂದುಗೂಡಿ ಸಮಾಲೋಚಿಸುವಂತೆ ಮಾಡಿತು. ಇದರ ಪರಿಣಾಮವಾಗಿ ೧೯೭೨ರಲ್ಲಿ ಕರ್ನಾಟಕ ದಲಿತ ಕ್ರಿಯಾಶಕ್ತಿ ಅಸ್ತಿತ್ವಕ್ಕೆ ಬಂದಿತು. ಇದಕ್ಕೂ ಮೊದಲು ಜಯಭೀಮ ಸಂಘ, ಅಂಬೇಡ್ಕರ್ ಸಂಘ, ಭೀಮಸೇನ ಸಂಘಟನೆಗಳು ಕ್ರಿಯಾಶೀಲವಾಗಿದ್ದು ಇವುಗಳ ಪ್ರಭಾವಗಳೇನು ಕಡಿಮೆ ಇರಲಿಲ್ಲ. ಆದರೆ ಈ ಸಂಘಟನೆಗಳು ದಲಿತರ ಸಮಸ್ಯೆಗಳಿಗೆ ಸ್ಪಂದಿಸುವಲ್ಲಿ ವಿಫಲವಾದವು. ಇದೇ ಕಾಲಘಟ್ಟದಲ್ಲಿ ೧೯೭೩ರ ಬಸವಲಿಂಗಪ್ಪ ಅವರ ''ಬೂಸ ಪ್ರಕರಣ'' ದಲಿತ ಸಂಘಟನೆಗೆ ಪ್ರೇರಣೆ ನೀಡಿತು ಹಾಗೂ ಸಚಿವರಾಗಿದ್ದ ಬಸವಲಿಂಗಪ್ಪನವರು 'ಮಲಹೋರುವ ಪದ್ಧತಿ'ಯನ್ನು ನಿಷೇಧಿಸಿ ಹೊರಡಿಸಿದ ಕಾನೂನು ಸಂಪ್ರದಾಯ ಬದ್ಧ ಜನರ ಸಿಟ್ಟನ್ನು ಕೆರಳಿಸಿತು. ಇವೆಲ್ಲವುಗಳ ಪರಿಣಾಮವಾಗಿ ಕರ್ನಾಟಕದಲ್ಲಿ ಬೃಹತ್ ದಲಿತ ಸಂಘಟನೆ ಅಸ್ತಿತ್ವಕ್ಕೆ ಬರಲು ಕಾರಣವಾಯಿತು.

ಇದೇ ಕಾಲದಲ್ಲಿ ೧೯೭೩ರಲ್ಲಿ ಮೈಸೂರಿನಲ್ಲಿ ಜಾತಿವಿನಾಶ ಸಮ್ಮೇಳನ ಜರುಗಿತು. ಪಿ.ಲಂಕೇಶ, ಪೂರ್ಣಚಂದ್ರ ತೇಜಸ್ವಿ, ರಾಮದಾಸ್, ದೇವನೂರ ಮಹದೇವ, ಸಿದ್ಧಲಿಂಗಯ್ಯ ಮೊದಲಾದವರು ಈ ಸಮ್ಮೇಳನದಲ್ಲಿ ಪಾಲ್ಗೊಂಡು ಕರ್ನಾಟಕದ ಜನಗಳಲ್ಲಿ ಒಂದು ಹೊಸ ಬಗೆಯ ಚಿಂತನೆ ಹುಟ್ಟು ಹಾಕಿದರು. ಇದೇ ಗುಂಪು ೧೯೭೪ರಲ್ಲಿ 'ಬರಹಗಾರರ ಮತ್ತು ಕಲಾವಿದರ ಒಕ್ಕೂಟ' ರಚಿಸಿಕೊಂಡು ಮೈಸೂರಿನಲ್ಲಿ ಸಮ್ಮೇಳನ ನಡೆಸಿ ಶೂದ್ರ ಪ್ರಜ್ಞೆಯನ್ನು ಜಾಗೃತಗೊಳಿಸಿದರು.[೬] ಈ ಹಿನ್ನೆಲೆಯಲ್ಲಿ ಮಹಾರಾಷ್ಟ್ರ ದಲಿತ ಪ್ಯಾಂಥರ್ ಚಳವಳಿಗಳಿಂದ ಪ್ರಭಾವಿತರಾದ ದಲಿತ ವಿದ್ಯಾವಂತ ಯುವಕರು ಪ್ರೊ.ಬಿ.ಕೃಷ್ಣಪ್ಪ ಅವರ ನಾಯಕತ್ವದಲ್ಲಿ ೧೯೭೪ ಭದ್ರಾವತಿಯಲ್ಲಿ ದಲಿತ ಸಂಘರ್ಷ ಸಮಿತಿ ಅಸ್ತಿತ್ವಕ್ಕೆ ಬಂದಿತು. ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಶೈಕ್ಷಣಿಕ ಹಕ್ಕುಗಳನ್ನು ಪಡೆದುಕೊಳ್ಳಲು ದಲಿತರೆಲ್ಲಾ ಒಂದಾಗಬೇಕು ಎಂದು ಕರೆ ನೀಡಿತು. ಶತಮಾನಗಳಿಂದ ಭಾರತದಾದ್ಯಂತ ನಡೆದಿರುವ ತಳವರ್ಗ, ಹಿಂದುಳಿದ ವರ್ಗದವರ ಪ್ರತಿಭಟನೆಗಳು ಕರ್ನಾಟಕದಲ್ಲಿಯೂ ಕಂಡುಬರುತ್ತಿದ್ದು, ಜಾತಿ ವಿನಾಶವೆಂದರೆ ಭಾರತೀಯರೆಲ್ಲರ ಐಕ್ಯಮತ್ಯ

ಎಂದು ಬಿ.ಆರ್.ಅಂಬೇಡ್ಕರ್ ಹೇಳಿದುದು ನಿಜವೆನಿಸಿದರೂ, ಜಾತಿಗಳಿಂದ ಮುಕ್ತವಾದ ಭಾರತವನ್ನು ಕಾಣಲಾದೀತೆ? ಎಂಬ ಪ್ರಶ್ನೆಗೆ ಉತ್ತರ[೭] ಹುಡುಕುವ ನಿಟ್ಟಿನಲ್ಲಿ ಜಾತಿ ವಿನಾಶ ಮತ್ತು ಸಾಮಾಜಿಕ ಸಮಾನತೆಗಾಗಿ ಹೋರಾಡುವುದೇ ದಲಿತ ಸಂಘರ್ಷ ಸಮಿತಿಯ ಧ್ಯೇಯವಾಗಿತ್ತು. ಹಾಗಾಗಿ ೧೯೭೭ರ ಜೂನ್‌ನಲ್ಲಿ ರಾಜ್ಯದ ಬೇರೆ-ಬೇರೆ ದಲಿತ ಸಂಘಟನೆಗಳ ಸಭೆ ಕರೆದು ಎಲ್ಲಾ ಸಂಘಟನೆಗಳನ್ನು ಒಗ್ಗೂಡಿಸಿ ಅದಕ್ಕೆ 'ಕರ್ನಾಟಕ ದಲಿತ ಸಂಘರ್ಷ ಸಮಿತಿ' ಎಂಬ ಹೆಸರನ್ನು ದಲಿತ ಸಂಘರ್ಷ ಸಮಿತಿ ಹೆಸರಿಗೆ ಪ್ರತಿಯಾಗಿ ಬಳಸಲಾಯಿತು.

## ಎಪ್ಪತ್ತರ ದಶಕದಲ್ಲಿ ದಲಿತ ಚಳವಳಿ

ಈ ಕಾಲಘಟ್ಟದಲ್ಲಿ ಕಂಡುಬಂದಂತಹ ರೈತ ಚಳವಳಿ, ಮಹಿಳಾ ಚಳವಳಿ, ದಲಿತ ಬಂಡಾಯ ಮತ್ತು ದಲಿತ ಚಳವಳಿಗಳ ಉಚ್ಛ್ರಾಯ ಕಾಲ ಎಂಬ ಅಭಿಪ್ರಾಯ ವ್ಯಕ್ತವಾಗುತ್ತದೆ. ರಾಜ್ಯದಲ್ಲಿ ದಲಿತರ ಮೇಲೆ ಅಕ್ರಮ, ಅನ್ಯಾಯ ಹಲ್ಲೆಗಳು ಎಲ್ಲೆ ನಡೆದರೂ ತಕ್ಷಣ ದಲಿತ ಸಂಘರ್ಷ ಸಮಿತಿ ಪ್ರತಿಭಟಿಸುತ್ತಿತ್ತು. ಇದರಿಂದಾಗಿ ದಲಿತರಿಗೆ ಒಂದು ಬಗೆಯ ಆತ್ಮ ವಿಶ್ವಾಸ, ಸ್ವಾಭಿಮಾನ ತುಂಬಿತು. ಸಂಘಟನೆ ಮತ್ತು ಹೋರಾಟದಿಂದ ದಲಿತರ ವಿಮೋಚನೆ ಸಾಧ್ಯ ಎಂಬ ಸಾಮಾನ್ಯ ತಿಳುವಳಿಕೆ ಜನರಲ್ಲಿ ಮೂಡುವಂತೆ ಮಾಡಿತು.[೮] ಪ್ರೊ.ಬಿ.ಕೃಷ್ಣಪ್ಪ, ಸಿದ್ಧಲಿಂಗಯ್ಯ, ದೇವನೂರು ಮಹದೇವ, ಮುಳ್ಳೂರು ನಾಗರಾಜ್ ಮೊದಲಾದವರ ನಾಯಕತ್ವದಲ್ಲಿ ಚಳವಳಿ ಪ್ರಬಲಗೊಂಡಿತು. ಭೂ ಆಕ್ರಮಣ, ಸಾಮಾಜಿಕ ದೌರ್ಜನ್ಯ, ಮಹಿಳೆಯರ ಮೇಲಿನ ಅತ್ಯಾಚಾರ ಇತ್ಯಾದಿಗಳ ವಿರುದ್ಧ ರಾಜಿ ಇಲ್ಲದೆ ಹೋರಾಟಗಳನ್ನು ಮಾಡಲಾರಂಭಿಸಿತು. ಚುನಾವಣೆ ಬಹಿಷ್ಕಾರ, ಬೆತ್ತಲೆ ಸೇವೆಗಳು, ಸುಶಿಕ್ಷಿತ ವಿದ್ಯಾವಂತರನ್ನು ಎಚ್ಚರಗೊಳಿಸುವಲ್ಲಿ ಯಶಸ್ಸು ಕಂಡವು. ಇಂಥ ಕಾರ್ಯಕ್ರಮಗಳ ಮೂಲಕ ದಲಿತ ಚಳವಳಿಗಳು ಸೋಲನ್ನು ಕಾಣದೆ ಮುನ್ನೆಡೆದವು ಎಂಬುದು ಗಮನಾರ್ಹ ಸಂಗತಿಯಾಗಿದೆ.

ಎಪ್ಪತ್ತರ ದಶಕದಲ್ಲಿ ದಲಿತ ಸಂಘರ್ಷ ಸಮಿತಿ ರಾಜ್ಯದ ಎಲ್ಲೆಡೆ ತನ್ನ ಚಳವಳಿಯನ್ನು ವಿಸ್ತರಿಸಿಕೊಂಡು ಬೆಳೆಯಿತು. ಮೊದಲಿನಿಂದಲೂ ರಾಜಕೀಯ ಪ್ರವೇಶದಿಂದ ತಟಸ್ಥವಾಗಿದ್ದ ದಲಿತ ಸಂಘರ್ಷ ಸಮಿತಿ ೧೯೮೮ರಲ್ಲಿ ರಾಜಕೀಯ ಪ್ರವೇಶ ಮಾಡಿದ್ದು ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರಲ್ಲಿ ಭಿನ್ನಾಭಿಪ್ರಾಯ ಮೂಡಲು ಕಾರಣವಾಯಿತು ಎಂಬುದು ತಿಳಿದುಬರುತ್ತದೆ.

ದಲಿತ ಸಂಘರ್ಷ ಸಮಿತಿ ಆರಂಭದಿಂದಲೂ ರಾಜಕೀಯದಿಂದ ತಟಸ್ಥವಾಗಿದ್ದು ಚುನಾವಣೆಗಳನ್ನು ಬಹಿಷ್ಕರಿಸುತ್ತಾ ಬಂದಿತು. ಆದರೆ ೧೯೮೮ರಲ್ಲಿ ರಾಜಕೀಯ ಪಕ್ಷಗಳನ್ನು ಬೆಂಬಲಿಸುವ ನಿರ್ಧಾರ ತೆಗೆದುಕೊಂಡಿರುವುದು ಕಾರ್ಯಕರ್ತರಲ್ಲಿ ಆಶ್ಚರ್ಯ ಮೂಡಿಸಿತು. ಜಿಲ್ಲೆ ಮತ್ತು ತಾಲ್ಲೂಕು ಸಮಿತಿಗಳ ಅಭಿಪ್ರಾಯವನ್ನು ಕೇಳದೆ ರಾಜ್ಯ ಸಮಿತಿ ಏಕಾಂಗಿ ನಿರ್ಧಾರ ತೆಗೆದುಕೊಂಡಿದ್ದು ಕಾರ್ಯಕರ್ತರಲ್ಲಿ ಬೇಸರ ತಂದ ವಿಷಯವಾಗಿತ್ತು. ಇದರಿಂದಾಗಿ ಪ್ರವರ್ಧಮಾನಕ್ಕೆ ಬೆಳೆದಿದ್ದ ದಲಿತ ಸಂಘರ್ಷ ಸಮಿತಿಯಲ್ಲಿ ಬಿರುಕು ಕಾಣಿಸಿಕೊಳ್ಳತೊಡಗಿತು. ಮೊದಲು ರಾಜಕೀಯ ಪ್ರವೇಶವನ್ನು ಕಟುವಾಗಿ ತಿರಸ್ಕರಿಸಿದ ಬಿ.ಕೃಷ್ಣಪ್ಪನವರು

ನಂತರದ ದಿನಗಳಲ್ಲಿ ರಾಜಕೀಯ ಪ್ರವೇಶಿಸುವುದರೊಡನೆ ಸಂಘಟನೆ ಹಾಗೂ ದಲಿತ ಚಳವಳಿಗೆ ಮಿತಿ ಇದೆ ಎಂಬುದನ್ನು ತೋರಿಸಿಕೊಟ್ಟರು. ಕೆಲವರು ದಲಿತ ಸಂಘರ್ಷ ಸಮಿತಿ ರಾಜಕೀಯ ಪ್ರವೇಶವನ್ನು ಬೆಂಬಲಿಸಿದರೆ ಮತ್ತೆ ಕೆಲವರು ರಾಜಕೀಯದಿಂದ ಸಂಪೂರ್ಣ ದೂರ ಇದ್ದು ಬಲಿಷ್ಠವಾದ ಸಾಮಾಜಿಕ ಸಂಘಟನೆಯಾಗಿ ಮಾಡುವ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಇದರಿಂದಾಗಿ ದಲಿತ ಸಂಘರ್ಷ ಸಮಿತಿ ಒಡೆದು ತೊಂಭತ್ತರ ದಶಕದಲ್ಲಿ ''ದಲಿತ ಸಂಘರ್ಷ ಸಮಿತಿ ಸಂಯೋಜಿತ'' ಮತ್ತು ''ದಲಿತ ಸಂಘರ್ಷ ಸಮಿತಿ ಸಂಚಾಲಕ'' ಎಂದು ಎರಡು ಸಂಘಟನೆಗಳು ಪ್ರತ್ಯೇಕವಾಗಿ ಅಸ್ತಿತ್ವಕ್ಕೆ ಬಂದವು. ಹಾಗೂ ನಾಯಕತ್ವಕ್ಕಾಗಿ ಪೈಪೋಟಿ, ಹಣದ ದುರುಪಯೋಗ, ಅಧಿಕಾರದ ದುರುಪಯೋಗದಿಂದಾಗಿ ಸಂಘಟನೆ ಒಗ್ಗಟ್ಟಿನಲ್ಲಿ ಬಿರುಕು ಮೂಡಲು ಇನ್ನೊಂದು ಕಾರಣ ಎನ್ನಬಹುದು. ಒಡೆದು ಆಳುವ ನೀತಿಯನ್ನು ಮೈಗೂಡಿಸಿಕೊಂಡಿರುವ ಆಡಳಿತ ವರ್ಗ ದಲಿತ ನಾಯಕರ ದೌರ್ಬಲ್ಯಗಳನ್ನು ತಮ್ಮ ಅಸ್ತ್ರವಾಗಿ ಬಳಸಿಕೊಂಡು ಸಂಘಟನೆಯನ್ನು ಒಡೆದು ಹಾಕುತ್ತ ತಮ್ಮ ಪ್ರಯತ್ನದಲ್ಲಿ ವಿಜಯ ಕಂಡರು. ವೈಯಕ್ತಿಕ ಆಸೆ ಆಕಾಂಕ್ಷೆಗಳಿಂದ ಸಮೂಹದ ಭವಿಷ್ಯವನ್ನೇ ಮಾರಿಕೊಳ್ಳುವ ಕೆಲವು ನಾಯಕರನ್ನು ಗುರುತಿಸಿ ಅವರನ್ನು ಕೊಂಡುಕೊಳ್ಳುವಲ್ಲಿ ಸಫಲರಾದರು ಎಂದರೆ ತಪ್ಪಾಗಲಾರದು.

ತೊಂಭತ್ತರ ದಶಕದಲ್ಲಿ ದಲಿತ ಸಂಘರ್ಷ ಸಮಿತಿ ಒಡೆದು ಹಲವು ನಾಯಕರ ನೇತೃತ್ವದಲ್ಲಿ ಸಂಘಟನೆಗಳು ಹುಟ್ಟಿಕೊಂಡವು. ಅವುಗಳು ತಮ್ಮದೇ ಆದ ಸಿದ್ಧಾಂತಗಳನ್ನು ರೂಪಿಸಿಕೊಂಡು ಮುನ್ನಡೆದಿವೆ. ಸಾಮಾಜಿಕ ಮತ್ತು ರಾಜಕೀಯ ಆಯಾಮದ ಚಳವಳಿಯಾಗಿ ಪ್ರಬಲವಾಗುತ್ತ ಹೋಗಬೇಕಾದ ದಲಿತ ಚಳವಳಿ ತನ್ನ ಅಂತರಂಗದ ಸತ್ವ ಕಳೆದುಕೊಂಡು ಪರಿಧಿಯ ಅಂಚಿಗೆ ತಳ್ಳಲ್ಪಟ್ಟಿದೆ. ಜಾತಿ ವಿನಾಶದ ವಿರುದ್ಧ ಹೋರಾಟ ರೂಪಿಸಿದ ದಲಿತ ಸಂಘರ್ಷ ಸಮಿತಿ ಇಂದು ತನ್ನೊಳಗಿನ ಜಾತಿ ಉಪಜಾತಿಗಳ ಪಿಡುಗನ್ನು ನಿವಾರಿಸಿಕೊಳ್ಳಲಾಗುತ್ತಿಲ್ಲದಿರುವುದು ಚಳವಳಿಯ ಆತ್ಮಶಕ್ತಿಯನ್ನು ಹೀರಬಲ್ಲ ಬಹುದೊಡ್ಡ ತಾತ್ವಿಕ ವೈರುಧ್ಯ ಕೂಡಾ ಆಗಿದೆ.

ದಲಿತ ಸಂಘಟನೆಗಳು ಇವತ್ತಿನ ದಿನಮಾನಗಳಲ್ಲಿ ಅಂಬೇಡ್ಕರ್ ಅಥವಾ ಜಗಜೀವನರಾಂ ಅವರ ಜಯಂತಿಯ ಆಚರಣೆಗೆ ಮಾತ್ರ ಸೀಮಿತವಾಗಿವೆ ಎಂಬ ಅಭಿಪ್ರಾಯಗಳು ಕೇಳಿಬರುತ್ತಿರುವುದು ದುರದೃಷ್ಟಕರ. ಇದಕ್ಕೆ ಕಾರಣಗಳನ್ನು ಹೇಳಬೇಕೆಂದರೆ ಸಂಘಟನೆಗಳನ್ನು ಸ್ಥಾಪಿಸಿದ ನಾಯಕರು ಎರಡನೇ ಸಾಲಿನ ಸಮರ್ಥ ನಾಯಕತ್ವವನ್ನು ಬೆಳೆಸದಿರುವುದು ಮತ್ತು ತಮ್ಮ ಮುಷ್ಠಿಯಲ್ಲೆ ಸಂಘಟನೆಗಳನ್ನು ಇಟ್ಟುಕೊಂಡಿರುವುದು. ಹಲವು ಬಣಗಳ ನಾಯಕರು ಮೀಸಲಾತಿ ಮತ್ತು ಒಳ ಮೀಸಲಾತಿ ವಿಷಯವನ್ನು ವಿಸ್ತರಿಸುತ್ತಿರುವುದು ಅಪಾಯಕಾರಿ ಬೆಳವಣಿಗೆ ಆಗಿದೆ. ಸಂಘಟನೆಯ ನಾಯಕರು ನಾಯಕತ್ವವನ್ನು ಬಿಟ್ಟುಕೊಡದೇ ತಾವೇ ಮುಂದುವರಿಯುತ್ತಿರುವುದು. ಹಲವು ಸಂಘಟನೆಗಳು ಕೇವಲ ಲೆಟರ್‌ಹೆಡ್ ಸಂಘಟನೆಗಳಾಗಿ ಉಳಿಯತೊಡಗಿವೆ. ಕೇವಲ ಸೌಲಭ್ಯಗಳಿಗಾಗಿ ಇವತ್ತು ಹೋರಾಡುವ ಸ್ಥಿತಿ ದಲಿತ ಸಂಘರ್ಷ ಸಮಿತಿಗೆ ಒದಗಿದೆ ಎಂದು ಹೇಳಬಹುದು.

ಆದರೂ ರಾಜ್ಯದ ಎಲ್ಲೆಡೆ ಗಂಭೀರವಾದ ಸಮಸ್ಯೆಗಳು ಎದುರಾದಾಗ ಎಲ್ಲಾ ಸಂಘಟನೆಗಳು ಒಟ್ಟಾಗಿ ಸೇರಿ ದಲಿತರಿಗೆ ನ್ಯಾಯ ದೊರಕಿಸಿ ಕೊಡುವಲ್ಲಿ ಮತ್ತು ರಕ್ಷಣೆ ನೀಡುವಲ್ಲಿ ಇಂದಿಗೂ ಹೋರಾಟ ಮಾಡುತ್ತಿವೆ. ಬೆಂಡಿಗೇರಿಯ ದಲಿತನೊಬ್ಬನಿಗೆ ಮಲ ತಿನ್ನಸಿದ ಪ್ರಕರಣ, ಮೈಸೂರು ಜಿಲ್ಲೆಯ ಬದನಬಾಳುವಿನ ದಲಿತ ಹತ್ಯಾಕಾಂಡ ಮತ್ತು ಕೋಲಾರ ಜಿಲ್ಲೆ ಕಂಬಾಲಪಲ್ಲಿಯಲ್ಲಿ ನಡೆದ ದಲಿತರ ಸಜೀವ ದಹನಗಳ ವಿರುದ್ಧ ನಡೆದ ದಲಿತ ಸಂಘಟನೆಗಳ ಹೋರಾಟ' ದಲಿತರ ಒಗ್ಗಟ್ಟಿಗೆ ಹಿಡಿದ ಕನ್ನಡಿಯಂತಿದೆ.

### ೨.೧. ಬಾಗಲಕೋಟೆ ಜಿಲ್ಲೆಯಲ್ಲಿ ದಲಿತ ಚಳವಳಿಯ ಉದಯ ಹಾಗೂ ಬೆಳೆದು ಬಂದದಾರಿ

ಭಾರತದ ಇಂದಿನ ಯಾವುದೇ ಸ್ವಾಭಿಮಾನದ ಬೇರು ಹಿಡಿದು ಹೊರಟರೆ ಅದು ಮುಟ್ಟುವುದು ಅಂಬೇಡ್ಕರ್ ಅವರಲ್ಲಿಗೆ. ಆ ಮೂಲಕವೇ ಬುದ್ಧ, ಬಸವ, ಫುಲೆ, ಪೆರಿಯಾರ್ ಮುಂತಾದವರು ಮನುಕುಲದ ಕಳಂಕ ನಿವಾರಣೆಗೆ ದುಡಿದವರೆಂದು ದಲಿತರಿಗೆ ದರ್ಶನವಾಗುವುದು; ಅಂಬೇಡ್ಕರ್ ಎನ್ನುವ ಅಂತಃಕರಣ ಸಂಸ್ಕೃತಿಯ ತಾಯಿ ಬೇರಿನ ಮೂಲಕ. ಪ್ರಸ್ತುತ ಸಂದರ್ಭದಲ್ಲಿ ನಾಡಿನ ಮೂಲೆ ಮೂಲೆಗಳಲ್ಲಿ ಸಂಘಟನೆಗಳು ಜೀವ ಪಡೆದಿವೆ ಎನ್ನುವುದಾದರೆ ಇಲ್ಲಿಯೂ ಅಂಬೇಡ್ಕರ್ ಚಿಂತನೆ ಪ್ರಮುಖವಾದುದು.[೧೧] ಕರ್ನಾಟಕದಲ್ಲಿಯ ದಲಿತ ಸಂಘರ್ಷ ಸಮಿತಿಗೆ ದಟ್ಟವಾದ ಪ್ರಭಾವವೆಂದರೆ ಮಹಾರಾಷ್ಟ್ರದ ದಲಿತ ಪ್ಯಾಂಥರ್ ಮತ್ತು ಮಾರ್ಕ್ಸ್‌ವಾದಿ ಚಿಂತನೆಗಳು ಸಹ ಇಲ್ಲಿ ಪ್ರಮುಖ ಪಾತ್ರ ವಹಿಸಿವೆ. ಈ ಹಿನ್ನೆಲೆಯಲ್ಲಿ ತನ್ನ ಸೈದ್ಧಾಂತಿಕ ನೆಲೆಗೆ ಅಂಟಿಕೊಂಡ ದಲಿತ ಸಂಘರ್ಷ ಸಮಿತಿ ಖಾಸಗಿ ಆಸ್ತಿ ಒಡೆತನ, ಗಾಂಧೀಜಿಯವರ ಪ್ರಾಮಾಣಿಕತೆ, ನೈತಿಕತೆ, ಅಂಬೇಡ್ಕರ್ ಅವರ ತಾತ್ವಿಕ ಸಿಟ್ಟು ಆಕ್ರೋಶದ ಮೂಲಕ ಸಮತಾವಾದದ ಪಥ ಸಂಚಲನ ನಡೆದುದ್ದು ನಿರ್ವಿವಾದ ಎನ್ನುವುದು ಗಮನಾರ್ಹ.

ಅವಿಭಜಿತ ಬಿಜಾಪುರ ಜಿಲ್ಲೆ ವಿಶಿಷ್ಟವಾದ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಪತ್ತು ಹೊಂದಿರುವುದಲ್ಲದೆ ಚಾರಿತ್ರಿಕವಾಗಿ ಘನತೆಯನ್ನು ಮೆರೆದಿದೆ. ಸಾಮಾಜಿಕ ಒಳಿತಿಗಾಗಿ ಬಸವಣ್ಣನಂತಹ ಅಪ್ರತಿಮ ಸಮಾಜ ಸುಧಾರಕನನ್ನು ನಾಡಿಗೆ ನೀಡಿದೆ. ಅನೇಕ ಪೌರಾಣಿಕ ಸಂಗತಿಗಳ ತವರೂ ಹೌದು. ಇದಲ್ಲದೆ ಈ ಜಿಲ್ಲೆಯ ಅನೇಕ ಪ್ರದೇಶಗಳಿಗೆ ಡಾ.ಅಂಬೇಡ್ಕರ್ ಅವರು ಭೇಟಿನೀಡಿದ್ದಾರೆ. ಹೀಗೆ ಅನೇಕ ಆಯಾಮಗಳಿಂದ ವೈಶಿಷ್ಟ್ಯವಾಗಿ ಮೆರೆದ ಬಿಜಾಪುರ ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿಯಂತಹ ಹೋರಾಟದ ಗಾಳಿ ಸ್ವಲ್ಪ ತಡವಾಗಿಯೇ ಬೀಸಿತು. ಏಕೆಂದರೆ ಜಿಲ್ಲೆಯ ಹೆಚ್ಚಿನ ದಲಿತರು ಅಶಿಕ್ಷಿತರು, ಅಲ್ಪಶಿಕ್ಷಣ ಪಡೆದವರಾಗಿದ್ದು ಹೋರಾಟದ ಆಲೋಚನೆಗಳಿಂದ ದೂರ ಇದ್ದರು. ಈ ಪ್ರದೇಶದ ದಲಿತರಲ್ಲಿ ಅಜ್ಞಾನ, ಜಾಗೃತಿ ಇಲ್ಲದಿರುವುದು ಮತ್ತು ಸಮರ್ಥ ಸಂಘಟನಾಕಾರರ ಕೊರತೆ, ಹೋರಾಟ, ಚಳವಳಿ ನಮ್ಮಂತವರಿಗೆ ಅಲ್ಲ ಎಂದು ಶೋಷಣೆ ಸಹಿಸಿಕೊಂಡು ಇದ್ದವರೇ ಹೆಚ್ಚಾಗಿದ್ದು ಕರ್ನಾಟಕದ ಎಲ್ಲಾ ಭಾಗಗಳಿಗಿಂತ ಇಲ್ಲಿ ಏಳೆಂಟು ವರ್ಷಗಳ ನಂತರ ಸಂಘಟನೆಗಳು ಹುಟ್ಟಿಕೊಂಡವು ಎಂದು ಹೇಳಬಹುದು.

ಕರ್ನಾಟಕದಲ್ಲಿ ೧೯೭೪ರಲ್ಲಿ ದಲಿತ ಸಂಘರ್ಷ ಸಮಿತಿ ಆರಂಭವಾಗಿ ಅನೇಕ ಜಿಲ್ಲೆಗಳಲ್ಲಿ ಕಾರ್ಯಾರಂಭ ಮಾಡಿ ಎಂಭತ್ತರ ಹೊತ್ತಿಗಾಗಲೇ ಒಂದು ಹಂತ ತಲುಪಿತ್ತು. ಆದರೆ ಬಿಜಾಪುರದಲ್ಲಿ ದಲಿತ ಸಂಘರ್ಷ

ಸಮಿತಿ ಪ್ರವೇಶ ೧೯೮೨ರ ಹೊತ್ತಿಗೆ ಅಂದರೆ ಸುಮಾರು ಏಳೆಂಟು ವರ್ಷಗಳು ತಡವಾಗಿಯೇ ಆಯಿತು. ಪ್ರೊ.ಕಲಾಲ, ಡಿ.ಜಿ.ಸಾಗರ, ಜಿ.ಕೆ.ಗೋಖಲೆ ಬೇಗಾರ, ಶಳ್ಳಾಗಿ ದೇವೇಂದ್ರ ಮುಂತಾದವರ ಮಾರ್ಗದರ್ಶನದಲ್ಲಿ ಬಿಜಾಪುರ ಜಿಲ್ಲಾ ದಲಿತ ಸಂಘರ್ಷ ಸಮಿತಿ ಪ್ರಾರಂಭವಾಯಿತು. ಶಿವರಾಜ ದೊಡ್ಡಮನಿ ಅವರನ್ನು ತಾತ್ಕಾಲಿಕವಾಗಿ ಜಿಲ್ಲಾ ಸಂಚಾಲಕರನ್ನಾಗಿ ಆಯ್ಕೆ ಮಾಡಲಾಯಿತು. ಈ ಸಂಘಟನೆ ಮೂಲಕ ಅಂಬೇಡ್ಕರ್ ಪ್ರೌಢಶಾಲೆಯ ಆಡಳಿತ ಮಂಡಳಿಯಿಂದ ನಡೆಯುತ್ತಿದ್ದ ಶೋಷಣೆ ವಿರುದ್ಧ ಹೋರಾಟವನ್ನು ಪ್ರಥಮವಾಗಿ ಕೈಗೆತ್ತಿಕೊಳ್ಳಲಾಯಿತು. ಆ ಸಂಸ್ಥೆಯ ಆಡಳಿತಾಧಿಕಾರಿಗಳು ಸಂಘಟನಾಕಾರರ ಮೇಲೆ ದೌರ್ಜನ್ಯ ಎಸಗಿದ ಪರಿಣಾಮವಾಗಿ ಸಂಘಟನೆ ಕಮರಿ ಹೋಯಿತು.

ಸುಮಾರು ಐದಾರು ವರ್ಷಗಳ ನಂತರ ಬಸವನ ಬಾಗೇವಾಡಿಯ ನರಸಲಗಿ ಗ್ರಾಮದ ಅಭಿಷೇಕ್ ಅವರು ದಲಿತರನ್ನು ಸಂಘಟಿಸತೊಡಗಿದರು. ಧಾರವಾಡದಲ್ಲಿ ವಿದ್ಯಾಭ್ಯಾಸ ಮಾಡುವ ಸಂದರ್ಭದಲ್ಲಿ ದಲಿತ ವಿದ್ಯಾರ್ಥಿ ಒಕ್ಕೂಟದ ಸಂಚಾಲಕರಾಗಿ ಕೆಲಸ ನಿರ್ವಹಿಸಿದ ಅನುಭವ ಹೊಂದಿದ್ದ ಇವರು ಊರಿನ ದಲಿತರನ್ನು ಜಾಗೃತಗೊಳಿಸುವ ಕಾರ್ಯದಲ್ಲಿ ತೊಡಗಿದರು. ಇವನ್ನೆಲ್ಲ ಸಹಿಸದ ಅಲ್ಲಿನ ಮೇಲ್ವರ್ಗದವರು ಯಾವುದೋ ನೆಪ ಮಾಡಿ ದಲಿತರಿಗೆ ಬಹಿಷ್ಕಾರ ಹಾಕಿದರು. ಈ ಘಟನೆಯನ್ನು ವಿರೋಧಿಸಿ ಸರಕಾರದಿಂದ ಬರಬೇಕಾದ ಎಲ್ಲ ಸೌಲಭ್ಯಗಳನ್ನು ಪಡೆಯುವಲ್ಲಿ ಅಭಿಷೇಕ ಚಕ್ರವರ್ತಿ ಸಫಲರಾದರು. ಹೀಗಾಗಿ ಜಿಲ್ಲೆಯ ತುಂಬಾ ಇವರ ಹೆಸರು ಪಸರಿಸಿತು. ದಲಿತ ಯುವಕರೆಲ್ಲ ಒಂದು ಗೂಡಿ ಇವರನ್ನು ಬೆಂಬಲಿಸತೊಡಗಿದರು ಇದರ ಪರಿಣಾಮದಿಂದ ಹಿರಿಯರ ಸಲಹೆ ಸಹಕಾರದ ಮೇರೆಗೆ ದಿನಾಂಕ.೧೦.೦೮.೧೯೮೮ರಂದು 'ದಲಿತ ಸಂಘರ್ಷ ಸಮಿತಿ ಜಿಲ್ಲಾ ಘಟಕ' ಉದ್ಘಾಟನೆ ಮಾಡಿದರು.[೧೧] ಈ ಸಮಾರಂಭಕ್ಕೆ ಅಂದಿನ ರಾಜ್ಯ ಸಂಚಾಲಕರಾಗಿದ್ದ ಚಂದ್ರ ಪ್ರಾಸದ ತ್ಯಾಗಿ, ರಾಜ್ಯ ಸಂಘಟನಾ ಸಂಚಾಲಕರಾದ ಕೋಲಾರದ ಎನ್.ವೆಂಕಟೇಶ ಆಗಮಿಸಿದ್ದರು. ಜಿಲ್ಲಾ ಸಂಚಾಲಕರಾಗಿ ಅಭಿಷೇಕ ಚಕ್ರವರ್ತಿ, ಸಂಘಟನಾ ಸಂಚಾಲಕರಾಗಿ ಬಸವರಾಜ ಚಲವಾದಿ, ಗೌರಿಶಂಕರ ಕೊಂಡಿಬಾ, ಖಜಾಂಚಿಯಾಗಿ ಎಚ್.ಟಿ.ಪೋತೆ ನೇಮಕವಾದರು. ಹೀಗೆ ಪ್ರಾರಂಭವಾದ ಬಿಜಾಪುರ ದಲಿತ ಸಂಘರ್ಷ ಸಮಿತಿ ವಸತಿ ನಿಲಯಗಳ ಸಮಸ್ಯೆ, ಐನಾಪುರ ಗ್ರಾಮದ ಹರಿಜನ ಬಹಿಷ್ಕಾರ, ಮೂಢನಂಬಿಕೆ ಆಚರಣೆಗಳ ವಿರುದ್ಧ ಜನರನ್ನು ಜಾಗೃತಗೊಳಿಸುವಲ್ಲಿ ದಲಿತ ಸಂಘರ್ಷ ಸಮಿತಿ ಕಾರ್ಯಪ್ರವೃತ್ತವಾಯಿತು.

ಬಾಗಲಕೋಟೆ ಜಿಲ್ಲೆಯ ಬಹುತೇಕ ಗ್ರಾಮಗಳಲ್ಲಿ ಅಸ್ಪೃಶ್ಯತೆ ಜೀವಂತವಾಗಿದ್ದು ಮೇಲ್ಜಾತಿಯವರ ಕ್ರೌರ್ಯದಿಂದ ಇಲ್ಲಿನ ದಲಿತರು ರೋಸಿ ಹೋಗಿದ್ದರು. ಜಿಲ್ಲೆಯ ದಲಿತ ಸಂಘರ್ಷ ಸಮಿತಿ ತನ್ನ ಪ್ರಭಾವವನ್ನು ಎಲ್ಲೆಡೆ ಪಸರಿಸುತ್ತಿರುವಾಗ ಜಾಗೃತಗೊಂಡ ಅಸ್ಪೃಶ್ಯರು ಸಂಘಟನೆಯತ್ತ ಮುಖಮಾಡಿದರು. ಪದವೀಧರ ಅಥವಾ ವಿದ್ಯಾವಂತ ಯುವಕರೆಲ್ಲ ಸಂಘಟನೆ ಸೇರಿ ಹೋರಾಟದಲ್ಲಿ ತೊಡಗಿಸಿಕೊಳ್ಳುವ ಉತ್ಸಾಹದಲ್ಲಿದ್ದರು. ೦೧.೧೦.೧೯೮೮ರಂದು ಹುನಗುಂದ ಹಾಗೂ ಬಾಗಲಕೋಟೆ ತಾಲ್ಲೂಕಿನಲ್ಲಿ ದಲಿತ ಸಂಘರ್ಷ ಸಮಿತಿ ಶಾಖೆಗಳನ್ನು ಆರಂಭಿಸಿದರು.[೨] ಸುಮಾರು ಮುನ್ನೂರು ದಲಿತ ಸಂಘರ್ಷ ಸಮಿತಿ

ಕಾರ್ಯಕರ್ತರು ಪಾಲ್ಗೊಂಡಿದ್ದ ಕಾರ್ಯಕ್ರಮವನ್ನು ಜಿಲ್ಲಾ ಸಂಚಾಲಕರು ಉದ್ಘಾಟಿಸಿ ಅನ್ಯಾಯ, ಶೋಷಣೆಯನ್ನು ಉಗ್ರವಾಗಿ ಪ್ರತಿಭಟಿಸುವಂತೆ ಕರೆ ನೀಡಿದರು. ಫಕೀರಪ್ಪ ಬಂಡಿ ತಾಲ್ಲೂಕು ಸಂಚಾಲಕರಾಗಿ ನೇಮಕವಾದರೆ ಇವರೊಂದಿಗೆ ಬಸವರಾಜ ಚಲವಾದಿ, ಎಚ್.ಎನ್.ನೀಲನಾಯ್ಕ್, ವಾಯ್.ಜಿ.ಹಿರೇಮನಿ, ಪರಶುರಾಮ ನೀಲನಾಯ್ಕ ಮುಂತಾದವರು ಭಾಗವಹಿಸಿ ದಲಿತರ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಡುವ ಉದ್ದೇಶವನ್ನು ವ್ಯಕ್ತಪಡಿಸಿದರು.

## ಜಿಲ್ಲಾ ದಲಿತ ಸಂಘರ್ಷ ಸಮಿತಿಯ ಉಚ್ಛ್ರಾಯ ಕಾಲ

೧೯೯೬-೯೭ರ ವರೆಗೂ ಜಿಲ್ಲಾ ದಲಿತ ಸಂಘರ್ಷ ಸಮಿತಿ ಅತಿ ಉತ್ಸಾಹದಿಂದ ಚಳವಳಿ ಮಾಡಿತು. ಜಿಲ್ಲೆಯ ಎಲ್ಲಾ ತಾಲ್ಲೂಕು ಶಾಖೆಗಳು ತಮ್ಮ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳ ದಲಿತರ ಸಮಸ್ಯೆಗಳನ್ನು ನಿವಾರಿಸುವಲ್ಲಿ ನಿರತವಾಗಿದ್ದವು. ಬಾಗಲಕೋಟೆ ತಾಲ್ಲೂಕಿನಲ್ಲಿ ಫಕೀರಪ್ಪ ಬಂಡಿ, ಜಮಖಂಡಿಯಲ್ಲಿ ಮಚ್ಛೇಂದ್ರ ಬೀದರಿ, ಹುನಗುಂದದಲ್ಲಿ ಬಸವರಾಜ ಚಲವಾದಿ, ಬೀಳಗಿಯಲ್ಲಿ ಶ್ರೀಶೈಲ ಚಲವಾದಿ, ಬಾದಾಮಿಯಲ್ಲಿ ಪರಶುರಾಮ ಕವಡಿಮಟ್ಟಿ ತಾಲ್ಲೂಕು ಸಂಚಾಲಕರಾಗಿ ದಲಿತರ ಮೇಲೆ ನಡೆಯುವ ದೌರ್ಜನ್ಯಗಳು ವಿರುದ್ಧ ಹೋರಾಟಗಳನ್ನು ತೀವ್ರಗೊಳಿಸಿದರು. ಪ್ರತಿ ತಾಲ್ಲೂಕಿನ ಅಸ್ಪೃಶ್ಯತೆ ಪ್ರಮಾಣ ಗುರುತಿಸಿ ಅಲ್ಲಿ ಕ್ರಮಕೈಗೊಳ್ಳುವ ಕಾರ್ಯ ಆರಂಭಿಸಿದರು. ಕೆಲವು ಗ್ರಾಮಗಳಲ್ಲಿ ಬಹಿಷ್ಕಾರದಂತಹ ಘಟನೆ ಜರುಗಿದವು. ಇದರಿಂದಾಗಿ ಚಳವಳಿಯ ಕಾವು ಇನ್ನೂ ಹೆಚ್ಚಾಗಿ ದಲಿತರ ಒಗ್ಗಟ್ಟು ಬಲಿಷ್ಟವಾಯಿತು. ಸರಕಾರ ಕಾನೂನುಗಳನ್ನು ಕಟ್ಟು ನಿಟ್ಟಾಗಿ ಜಾರಿಗೆ ತಂದು ಎಲ್ಲರೂ ಅದನ್ನು ಪಾಲಿಸುವಂತೆ ಮಾಡಬೇಕೆಂದು ಹೋರಾಟಗಳನ್ನು ತೀವ್ರಗೊಳಿಸಿತು. ಪ್ರತಿಯೊಂದು ಗ್ರಾಮಗಳಲ್ಲಿ ಅಂಬೇಡ್ಕರ್ ತತ್ವ ಬೋಧನೆ ಮಾಡಿ ಸಂಘಟನೆ ಬಲಪಡಿಸಿದರು. ಸಾವಳಗಿ ಗ್ರಾಮದ ಗೋಲಿಬಾರ್ ಘಟನೆ, ದಲಿತರ ಮೇಲಿನ ದೌರ್ಜನ್ಯ ಖಂಡಿಸಿ ರಾಜ್ಯಾದ್ಯಂತ ಪ್ರತಿಭಟನಾ ರ್‍ಯಾಲಿ ಹಮ್ಮಿಕೊಂಡಿದ್ದು ಈಗ ಇತಿಹಾಸ. ಬಂಡಾವಾಳಶಾಹಿ, ಜಮೀನ್ದಾರರ ಎದೆಯಲ್ಲಿ ನಡುಕ ಹುಟ್ಟಿಸಿದ ದಲಿತ ಸಂಘರ್ಷ ಸಮಿತಿ ತೊಂಭತ್ತರ ದಶಕದ ಮಧ್ಯದಲ್ಲಿ ಬಿರುಕು ಮೂಡಿದ ಕಾರಣ ಚಳವಳಿಗಳು ಇಳಿಮುಖವಾದವು.

## ಬಾಗಲಕೋಟೆ ದಲಿತ ಸಂಘರ್ಷ ಸಮಿತಿ ಒಡಕು

೧೯೯೬-೯೭ರ ಹೊತ್ತಿಗೆ ಬಾಲಕೋಟೆ ದಲಿತ ಸಂಘರ್ಷ ಸಮಿತಿಯಲ್ಲಿ ಒಡಕು ಕಾಣಿಸಿಕೊಂಡಿತು. ದಲಿತ ಸಂಘರ್ಷ ಸಮಿತಿ. ನಾಯಕರ ರಾಜಕೀಯ ಪ್ರವೇಶ, ದಲಿತ ಕ್ರೈಸ್ತರ ಮೀಸಲಾತಿ ಮತ್ತು ಬಿ.ಎಸ್.ಪಿ. ನಾಯಕಿ ಮಾಯಾವತಿ ಕೋಮುವಾದಿ ಬಿ.ಜೆ.ಪಿ.ಯೊಂದಿಗೆ ಮೈತ್ರಿ ಮಾಡಿಕೊಂಡಿದ್ದು. ಹಾಗೂ ದಲಿತ ಸಂಘರ್ಷ ಸಮಿತಿ ನಾಯಕರು ತಮ್ಮ ಅಧಿಕಾರದ ಅವಧಿ ಮುಗಿದ ನಂತರವೂ ಬೇರೆಯವರಿಗೆ ಅವಕಾಶ ಮಾಡಿಕೊಡದೆ ತಾವೇ ಅಧಿಕಾರದಲ್ಲಿ ಮುಂದುವರಿದಿದ್ದು, ಹೀಗೆ ಅನೇಕ ಕಾರಣಗಳು ಕಾರ್ಯಕರ್ತರಲ್ಲಿ ವೈಮನಸ್ಸು ತಂದು ಜಿಲ್ಲಾ ದಲಿತ ಸಂಘರ್ಷ ಸಮಿತಿ ಒಡೆಯಲು ಕಾರಣವಾದವು. ದಲಿತ ಸಂಘರ್ಷ ಸಮಿತಿ ರಾಜಕೀಯ ಪ್ರವೇಶ ಬೆಂಬಲಿಸಿದ ಜಿಲ್ಲಾ ನಾಯಕರು ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್,

ಪುರಸಭೆ, ಗ್ರಾಮ ಪಂಚಾಯಿತಿಗಳ ಚುನಾವಣೆಯಲ್ಲಿ ಸ್ಪರ್ಧಿಸುವುದರ ಮೂಲಕ ರಾಜಕೀಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಂಘಟನೆಯಿಂದ ದೂರ ಉಳಿದರು. ರಾಜಕೀಯೇತರ ನಾಯಕರು ಮತ್ತು ಕಾರ್ಯಕರ್ತರು ವಿಘಟನೆ ಹೊಂದಿ ಜಿಲ್ಲಾ ದಲಿತ ಸಂಘರ್ಷ ಸಮಿತಿ ತನ್ನ ಕಾರ್ಯಚಟುವಟಿಕೆಗಳನ್ನು ನಿರ್ಲಕ್ಷಿಸಿತು ಎಂದರೆ ತಪ್ಪಾಗಲಾರದು.

### ೨.೨. ದಲಿತ ಚಳವಳಿಯ ಪ್ರಮುಖ ವ್ಯಕ್ತಿಗಳು

#### ೧. ಅಭಿಷೇಕ್ ಚಕ್ರವರ್ತಿ:

ಕರ್ನಾಟಕದಲ್ಲಿ ಎಪ್ಪತ್ತರ ದಶಕದಲ್ಲಿ ಹುಟ್ಟಿದ ದಲಿತ ಸಂಘರ್ಷ ಸಮಿತಿ, ಬಿಜಾಪುರ ಜಿಲ್ಲೆಯಲ್ಲಿ ಸುಮಾರು ಎಂಭತ್ತರ ದಶಕದಲ್ಲಿ ಹುಟ್ಟಿತು. ಜಾತಿ ಪದ್ಧತಿ, ದಬ್ಬಾಳಿಕೆ, ಶೋಷಣೆಯಂತಹ ಅಹವಾಲುಗಳಿಗೆ ಸ್ಪಂದಿಸುತ್ತಾ ಹಳ್ಳಿ ಹಳ್ಳಿಗಳ ದಲಿತ ಸಮಸ್ಯೆಗಳನ್ನು ಉಗ್ರವಾಗಿ ಪ್ರತಿಭಟಿಸಿತು. ಜಿಲ್ಲೆಯ ದಲಿತ ಚಳವಳಿ ಅಡಿಪಾಯ ಹಾಕಿದ ಅಭಿಷೇಕ್ ಚಕ್ರವರ್ತಿಯವರ ನಾಯಕತ್ವದಲ್ಲಿ ಸಾಗಿದ ದಲಿತ ಹೋರಾಟ ಸಮಾಜದ ಎಲ್ಲ ಅನಿಷ್ಟ ಆಚರಣೆಗಳನ್ನು ಸಾರಾಸಗಟಾಗಿ ಖಂಡಿಸುತ್ತ ಮುನ್ನಡೆಯಿತು. ಚಕ್ರವರ್ತಿಯವರ ನಾಯಕತ್ವದಲ್ಲಿ ಅನೇಕ ಕಾರ್ಯಕರ್ತರು ರೂಪುಗೊಂಡಿದ್ದು ಪ್ರತಿ ತಾಲೂಕಿನಲ್ಲಿಯೂ, ಹಳ್ಳಿಗಳಲ್ಲಿಯೂ ದಲಿತ ಸಂಘರ್ಷ ಸಮಿತಿ ಶಾಖೆಗಳನ್ನು ಆರಂಭಿಸಿ ಸಮಾಜದ ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ಸಮರ ಸಾರಿದರು ಎಂದರೆ ತಪ್ಪಾಗಲಾರದು. ಜಿಲ್ಲೆಯ ಉದ್ದಗಲಕ್ಕೂ ದಲಿತ ಹೋರಾಟದ ಕೆಚ್ಚನ್ನು ಮೂಡಿಸಿದರು. ಅನಿಷ್ಟ ಪದ್ಧತಿಗಳಲ್ಲಿ ಒಂದಾದ 'ನೀರು ಓಕಳಿ'ಯನ್ನು ೧೯೮೬ರಲ್ಲಿ ಸರಕಾರವೇ ಅದನ್ನು ನಿಷೇಧಿಸುವಂತೆ ಪ್ರಯತ್ನ ಪಟ್ಟ ಪ್ರಮುಖರಲ್ಲಿ ಇವರು ಒಬ್ಬರು. ಇದು ಎಷ್ಟೋ ದಲಿತ ಮಹಿಳೆಯರಿಗೆ ಆಗುತ್ತಿದ್ದ ದೈಹಿಕ ಹಿಂಸೆಯಿಂದ ಮುಕ್ತಿ ಸಿಗುವಂತೆ ಮಾಡಿತು. ಮಾತ್ರವಲ್ಲ ಪ್ರತಿ ತಾಲ್ಲೂಕಿನ ಅಸ್ಪೃಶ್ಯತೆಯ ವರದಿ ತಯಾರಿಸಿ ಅಸ್ಪೃಶ್ಯತೆ ಆಚರಣೆ ಮಾಡುವವರ ವಿರುದ್ಧ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಸರಕಾರಕ್ಕೆ ಮನವಿ ಸಲ್ಲಿಸುವುದರ ಮೂಲಕ ಜಿಲ್ಲೆಯ ಮೇಲ್ವರ್ಗದವರಿಗೆ ಸಿಂಹಸ್ವಪ್ನವಾಗಿದ್ದರು ಎಂದರೆ ತಪ್ಪಾಗಲಾರದು. ಇಂತಹ ಹಲವಾರು ಪ್ರತಿಭಟನೆಗಳ ಮೂಲಕ ಸವರ್ಣೀಯರಲ್ಲಿ ನಡುಕ ಹುಟ್ಟಿಸಿದ ಈ ಸಂಘಟನೆ ಇಂದು ರಾಜಕೀಯ ಹಿತಾಸಕ್ತಿಗಳಿಗೆ ಬಲಿಯಾಗಿ ಜಾತಿ ಸಂಘಟನೆ ಮಾತ್ರವಾಗಿ ಒಡೆದು ಹೋಗಿರುವುದು ವಿಪರ್ಯಾಸದ ಸಂಗತಿ ಎಂದೇ ಹೇಳಬಹುದು. ಆದರೆ ಸಂಘಟನೆಗಳ ಮೂಲಕ ದಲಿತರು ತಮಗಾದ ಅನ್ಯಾಯದ ವಿರುದ್ಧ ಪ್ರಶ್ನೆ ಕೇಳುವ ಜವಾಬ್ದಾರಿ ತಂದುಕೊಟ್ಟಿದ್ದು ನಿಜ. ಇಂದಿನ ದಲಿತ ಸಂಘರ್ಷ ಸಮಿತಿ ಹಲವಾರು ಬಣಗಳಾಗಿ ರೂಪುಗೊಂಡು ಆಯಾ ಬಣಗಳ ನಾಯಕರ ಸ್ವಹಿತಾಸಕ್ತಿಗನುಗುಣವಾಗಿ ನಡೆಯುತ್ತಿವೆ ಎಂದು ಅಭಿಪ್ರಾಯಪಡಬಹುದು.

#### ೨. ಎಚ್.ಟಿ.ಪೋತೆ:

ಬಿಜಾಪುರ ದಲಿತ ಸಂಘರ್ಷ ಸಮಿತಿ ಸ್ಥಾಪಕರಲ್ಲಿ ಒಬ್ಬರಾದ ಎಚ್.ಟಿ.ಪೋತೆ ವಿದ್ಯಾರ್ಥಿ ದೆಸೆಯಲ್ಲಿ ದಲಿತ ಚಳವಳಿಯನ್ನು ಪ್ರವೇಶಿಸಿ ಅಸ್ಪೃಶ್ಯತಾ ನಿವಾರಣೆ, ದಲಿತ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಕಂಕಣ

ಬದ್ಧರಾಗಿದ್ದರು. ದಲಿತ ಜನಾಂಗದ ಮೇಲೆ ಶತಮಾನಗಳಿಂದ ಆಗುತ್ತಿರುವ ಶೋಷಣೆ ನಿಲ್ಲಬೇಕು. ಅಂಬೇಡ್ಕರ್ ತತ್ವಗಳಾದ ಶಿಕ್ಷಣ-ಸಂಘಟನೆ-ಹೋರಾಟದ ಬಗ್ಗೆ ನಮ್ಮ ಜನರಲ್ಲಿ ಅರಿವು ಮೂಡಿಸಬೇಕೆನ್ನುವ ನಿಟ್ಟಿನಲ್ಲಿ ಸದಾ ಕ್ರಿಯಾಶೀಲರಾಗಿದ್ದು ಸಂಘಟನೆಯ ಕಾರ್ಯಕ್ರಮಗಳಲ್ಲಿ ಭಾಷಣಗಳ ಮೂಲಕ ಕಾರ್ಯಕರ್ತರನ್ನು ಪ್ರೋತ್ಸಾಹಿಸುತ್ತಿದ್ದರು. ತಮ್ಮ ಬರವಣಿಗೆಗಳ ಮುಖಾಂತರ ಅಂಬೇಡ್ಕರ್ ಅವರ ವಿಚಾರ ಧಾರೆಗಳು ಅಸ್ಪೃಶ್ಯರನ್ನು ಎಚ್ಚರಗೊಳಿಸುವಂತೆ ಮಾಡಿದ್ದಾರೆ. ಪ್ರಸ್ತುತ ಇವರು ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದ ಪ್ರವಾಚಕರಾಗಿದ್ದು, ದಲಿತ ವಿಚಾರಗಳಿಗೆ ಸಂಬಂಧಿಸಿದಂತೆ ಕೃತಿ ರಚಿಸುತ್ತಾ ಬಂದಿದ್ದಾರೆ. ಹತ್ತು-ಹಲವು ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದು ಅನೇಕ ವಿಚಾರಸಂಕಿರಣ ಕಾರ್ಯಕ್ರಮಗಳನ್ನು ಸಂಘಟನೆ ಮಾಡಿ ಸಂಘಟನಾ ಸಾಮರ್ಥ್ಯ ಎತ್ತಿ ತೋರಿಸಿದ್ದಾರೆ ಎಂಬುದು ಗಮನಾರ್ಹ.

೩. ಬಸವರಾಜ ಚಲವಾದಿ:

ಪದವೀಧರರಾದ ಮೇಲೆ ಉದ್ಯೋಗ ಅರಸುತ್ತಾ ಹೋಗುವ ಯುವಕರೇ ಬಹಳ. ಆದರೆ ತನ್ನ ಸಮುದಾಯದ ಮೇಲೆ ಆಗುತ್ತಿರುವ ದೌರ್ಜನ್ಯಗಳನ್ನು ಅರಿತು ಪ್ರತಿಭಟನೆಯ ಹಾದಿ ತುಳಿದವರಲ್ಲಿ ಬಸವರಾಜ ಚಲವಾದಿ ಕೂಡಾ ಒಬ್ಬರು. ಬಾಗಲಕೋಟೆ ವಿಭಾಗದಲ್ಲಿ ಆಗುತ್ತಿರುವ ದಲಿತರ ಶೋಷಣೆ ವಿದ್ಯಾವಂತ ಯುವಕರನ್ನು ಸುಮ್ಮನೆ ಇರುವಂತೆ ಮಾಡಲಿಲ್ಲ. ಆಗಲೇ ಕರ್ನಾಟಕದಲ್ಲಿ ದಲಿತ ಚಳವಳಿ ಆರಂಭವಾಗಿ ಹತ್ತು ವರ್ಷಗಳೇ ಆಗಿದ್ದು ಈ ಭಾಗದ ದಲಿತರು ಮಾತ್ರ ಶೋಷಣೆಯನ್ನು ಸಹಿಸಿಕೊಂಡು ಇರುವುದು ವಿದ್ಯಾವಂತ ಯುವಕರನ್ನು ಕಾಡುತ್ತಲೇ ಇತ್ತು. ಇದಕ್ಕೆ ಪೂರಕ ಎಂಬಂತೆ ಜಿಲ್ಲಾ ಸಂಘಟನೆ ಪ್ರಾರಂಭವಾಗಿದ್ದು ಹೋರಾಟದ ಮನೋಭಾವಕ್ಕೆ ಒಂದು ಸ್ಫೂರ್ತಿ ಒದಗಿಸಿದಂತಾಯಿತು. ರೋಗಿ ಬಯಸಿದ್ದು ಹಾಲು ಅನ್ನ, ವೈದ್ಯ ಹೇಳಿದ್ದು ಹಾಲು ಅನ್ನ ಎಂಬಂತೆ ಹೋರಾಟ ಮಾಡಲು ಸಂಘಟನೆ ಒಂದರ ಅವಶ್ಯಕತೆ ಬಯಸುತ್ತಿದ್ದ ಯುವಕರಿಗೆ ಒಂದು ಗೂಡು ಸಿಕ್ಕಂತಾಗಿ ಅದರ ಮುಖಾಂತರ ಈ ಭಾಗದಲ್ಲಿ ಚಳವಳಿ ಆರಂಭಿಸಿ ಎಲ್ಲ ಅನಾಚಾರ, ಅನಿಷ್ಟ, ಕ್ರೂರ ಸಂಪ್ರದಾಯಗಳನ್ನು ಧಿಕ್ಕರಿಸುವಂತೆ ದಲಿತರನ್ನು ಮುಖ್ಯವಾಹಿನಿಗೆ ತರುವಲ್ಲಿ ಶ್ರಮಿಸಿದವರು ಎಂದು ಹೇಳಿದರೆ ತಪ್ಪಾಗಲಾರದು.

೪. ರಾಜು ಆಲಗೂರ

ಬಿ.ಎಲ್.ಡಿ.ಇ.ಸಂಸ್ಥೆಯಲ್ಲಿ ಅಧ್ಯಾಪಕರಾಗಿದ್ದು ಜೀವನ ಸಾಗಿಸಲು ಯಾವ ತೊಂದರೆ ಇಲ್ಲದೆ ಜೀವನ ನಡೆಸಬಹುದಾಗಿದ್ದ ರಾಜು ಆಲಗೂರ ಅವರು ದಲಿತ ಚಳವಳಿಯ ಪ್ರಭಾವಕ್ಕೊಳಗಾಗಿ ದಲಿತ ಸಂಘರ್ಷ ಸಮಿತಿಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡರು. ತಮ್ಮ ಕ್ರಿಯಾತ್ಮಕ ಚಟುವಟಿಕೆ ಮೂಲಕ ದಲಿತ ಸಂಘರ್ಷ ಸಮಿತಿ ಎಲ್ಲಾ ಕಾರ್ಯಕ್ರಮ, ಪ್ರತಿಭಟನೆಗಳಲ್ಲಿ ಭಾಗವಹಿಸಿ ವಾಕ್‌ಚಾತುರ್ಯದ ಮೂಲಕ ದಲಿತ ಯುವಕರ ಮನಸ್ಸನ್ನು ಸೆಳೆಯುವಲ್ಲಿ ಸಫಲರಾದರು. ದಲಿತ ಸಂಘರ್ಷ ಸಮಿತಿಯ ಪರ್ವಕಾಲದಲ್ಲಿ ಇವರ ಸೇವೆ ಮರೆಯಲಾಗದಂತಹದ್ದು. ಸಂಘಟನೆಯಲ್ಲಿ ಬಹಳ ಬೇಗನೆ ಗುರುತಿಸಿಕೊಂಡು ಕೆಲವೇ

ದಿನಗಳಲ್ಲಿ ಜಿಲ್ಲಾ ಸಂಚಾಲಕರಾಗಿ ಹತ್ತು ವರ್ಷಗಳ ಕಾಲ ಜವಾಬ್ದಾರಿ ಹೊತ್ತು ದಲಿತ ಸಂಘರ್ಷ ಸಮಿತಿಯನ್ನು ಮುನ್ನಡೆಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ದಲಿತರು ರಾಜಕೀಯ ಅಧಿಕಾರ ಹಿಡಿಯುವುದು ಅಂಬೇಡ್ಕರ್ ಅವರ ಕನಸಾಗಿತ್ತು. ಈ ನಿಟ್ಟಿನಲ್ಲಿ ರಾಜಕೀಯ ಪ್ರವೇಶ ಮಾಡಿ ಮೀಸಲು ಕ್ಷೇತ್ರವಾದ ಬಳ್ಳೊಳ್ಳಿಯಿಂದ ಸ್ಪರ್ಧಿಸಿ ಎಂ.ಎಲ್.ಎ. ಆದರು. ರಾಜಕೀಯದಲ್ಲಿ ಸಕ್ರಿಯರಾದ ನಂತರ ದಲಿತ ಚಳವಳಿಯಿಂದ ದೂರ ಉಳಿದಿದ್ದಾರೆ ಎನ್ನುವ ಆರೋಪ ಅವರು ಎದುರಿಸುತ್ತಿರುವುದು ಕಂಡುಬರುತ್ತದೆ.

**೫.ರಮೇಶ ಆಸಂಗಿ:**

ಬಿಜಾಪುರ ದಲಿತ ಸಂಘರ್ಷ ಸಮಿತಿಯ ಸಂಘಟನೆಯಲ್ಲಿ 'ಹುಲಿ' ಎಂದು ಹೆಸರಾಗಿರುವವರು ರಮೇಶ ಆಸಂಗಿ. ರಾಜು ಆಲಗೂರು ಅವರೊಂದಿಗೆ ಇವರು ಮುಂಚೂಣಿಯಲ್ಲಿದ್ದ ನಾಯಕರು. ವಿದ್ಯಾರ್ಥಿ ದಿಸೆಯಲ್ಲಿಯೇ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡು ಬೂಸಾ ಪ್ರಕರಣದಲ್ಲಿ ಬಸವಲಿಂಗಪ್ಪನವರ ಪರವಾಗಿ ಹೋರಾಟ ಮಾಡಿದರು. ದಲಿತ ಜನಾಂಗದ ಮೇಲೆ ಆಗುತ್ತಿರುವ ಅನ್ಯಾಯ, ದೌರ್ಜನ್ಯಗಳನ್ನು ತೀವ್ರವಾಗಿ ಖಂಡಿಸಿ ಮೇಲ್ವರ್ಗದವರಿಗೆ ಸವಾಲೆಸೆದವರು ಆಸಂಗಿಯವರು. ಇಂದಿಗೂ ಬಿಜಾಪುರ ಜಿಲ್ಲೆಯಲ್ಲಿ ಇವರ ಹೆಸರು ಚಿರಪರಿಚಿತ. 'ಹಕ್ಕನ್ನು ಕಸಿದುಕೊಂಡವರ ಸೊಕ್ಕನ್ನು ಮುರಿತೀವಿ' ಎಂಬ ಘೋಷಣೆಯೊಂದಿಗೆ ಶ್ರೀಮಂತ ಮೇಲ್ವರ್ಗದವರ ದಬ್ಬಾಳಿಕೆಯನ್ನು ತಿರಸ್ಕರಿಸಿ ದಲಿತರ ಹಕ್ಕುಗಳಿಗಾಗಿ ಸದಾ ಶ್ರಮಿಸುತ್ತಿದ್ದಾರೆ. ರಾಜು ಆಲಗೂರ ಅವರು ಶಾಸಕರಾದ ಮೇಲೆ ದಲಿತ ಸಂಘರ್ಷ ಸಮಿತಿ ಜವಾಬ್ದಾರಿ ಹೊತ್ತು ಅದನ್ನು ಮುನ್ನಡೆಸುತ್ತಿರುವುದು ಕಂಡುಬರುತ್ತದೆ. ಈಗಲೂ ದಲಿತ ಚಳವಳಿಯ ಬಗ್ಗೆ ಅವರಿಗೆ ಇರುವ ಉತ್ಸಾಹ ಯುವಕರಿಗೆ ನಾಚಿಕೆ ತರಿಸುವಂತಹದು ಎಂದು ಹೇಳಿದರೆ ತಪ್ಪಾಗದು.

**೬. ಫಕೀರಪ್ಪ ಬಂಡಿ:**

ಬಾಗಲಕೋಟೆ ವಿಭಾಗದ ತಾಲ್ಲೂಕು ಸಂಚಾಲಕರಾಗಿದ್ದ ಫಕೀರಪ್ಪ ಬಂಡಿ, ಅವಿಭಜಿತ ಜಿಲ್ಲೆಯ ಬಾಗಲಕೋಟೆ ತಾಲ್ಲೂಕಿನ ಜವಾಬ್ದಾರಿ ಹೊತ್ತವರು ಈ ಭಾಗದ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳ ವಿರುದ್ಧ ಸಿಡಿದೆದ್ದ ಯುವಕರಲ್ಲಿ ಇವರು ಮೊದಲಿಗರು. ಅತ್ಯಾಚಾರ, ಶೋಷಣೆ, ಬಹಿಷ್ಕಾರಗಳಂತಹ ಅಮಾನುಷ ಘಟನೆಗಳಿಗೆ ಇಲ್ಲಿನ ದಲಿತರು ಬಲಿಯಾಗಿದ್ದು ಅಸ್ಪೃಶ್ಯತೆ ನರ್ತನವಾಡುತ್ತಿರುವ ಸಂದರ್ಭದಲ್ಲಿ ಶಿಕ್ಷಿತ ಯುವಕರೆಲ್ಲ ಸೇರಿ ತಾಲ್ಲೂಕು ದಲಿತ ಸಂಘರ್ಷ ಸಮಿತಿ ಸಂಘಟನೆ ಮೂಲಕ ತಮಗೆ ನಡೆಯುತ್ತಿರುವ ಶೋಷಣೆ ವಿರುದ್ಧ ಹೋರಾಡಲು ಸಂಘಟಿತರಾದರು. ಹಳ್ಳಿ ಹಳ್ಳಿಗಳಲ್ಲಿ ಅಂಬೇಡ್ಕರ್ ತತ್ವ ಬೋಧನೆ ಕಾರ್ಯಕ್ರಮ ಏರ್ಪಡಿಸುವುದರ ಮುಖಾಂತರ ದಲಿತರನ್ನು ಜಾಗೃತಿಗೊಳಿಸುವಲ್ಲಿ ತೊಡಗಿಸಿಕೊಂಡರು. ಅನ್ಯಾಯ, ಶೋಷಣೆ ವಿರುದ್ಧ ಪ್ರಶ್ನಿಸುವ ಮನೋಬಲ ಹೊಂದುವಂತೆ ಮಾಡಿ ದಲಿತರನ್ನು ನಾಗರಿಕ ಸಮಾಜದ ಇನ್ನೊಂದು ಮುಖದ ಪರಿಚಯ ಮಾಡಿಕೊಡುವಲ್ಲಿ ಶ್ರಮ ಪಟ್ಟರು ಎಂದು ಹೇಳಬಹುದು.

೭. ಪರಶುರಾಮ ನೀಲನಾಯ್ಕ:

ಬಾಲ್ಯದಿಂದಲೇ ದಲಿತ ಸಮುದಾಯದಲ್ಲಿ ಅವಮಾನ, ಶೋಷಣೆಯಿಂದ ಬೆಂದು, ಮೇಲ್ವರ್ಗದವರ ವಿರುದ್ಧ ಸಿಡಿದೆದ್ದವರು ಪರಶುರಾಮ ನೀಲನಾಯ್ಕ. ಮೂಢನಂಬಿಕೆ, ಆಚರಣೆಗಳನ್ನು ಬಾಲ್ಯದಿಂದಲೇ ಧಿಕ್ಕರಿಸುತ್ತ ಅವುಗಳ ನಿಜ ಸ್ವರೂಪವನ್ನು ಬಯಲಿಗೆಳೆಯುವ ಪ್ರಯತ್ನ ಮಾಡಿದವರು. ಜಡರಾಮ್‌ಕಂಟಿ ಒಂದು ಚಿಕ್ಕ ಗ್ರಾಮ. ಅಲ್ಲಿ ಮೇಲ್ವರ್ಗದವರ ದಬ್ಬಾಳಿಕೆಯಿಂದಾಗಿ ಅಸ್ಪೃಶ್ಯತೆ ಜೀವಂತವಾಗಿದೆ. ದಲಿತರು ಒಳ್ಳೆಯ ಉಡುಪು ಧರಿಸಿಕೊಂಡು ಓಡಾಡುವಂತಿಲ್ಲ. ಜೀತದಾಳುಗಳಾಗಿ ಸಂಬಳವಿಲ್ಲದೆ ಅವರ ಮನೆಯ ಕೆಲಸ ಮಾಡುವ ಸ್ಥಿತಿ ಅಲ್ಲಿನ ದಲಿತರದಾಗಿತ್ತು. ದಲಿತ ಸಂಘರ್ಷ ಸಮಿತಿ ಹೋರಾಟ ಹಳ್ಳಿಗಳನ್ನು ತಲುಪಿರಲಿಲ್ಲ. ಅಲ್ಪ ಮಟ್ಟಿನ ಶಿಕ್ಷಣ ಹೊಂದಿರುವ ಇಲ್ಲಿನ ದಲಿತ ಯುವಕರು ಶ್ರೀಮಂತ ವರ್ಗದ ವಿರುದ್ಧ ದನಿ ಎತ್ತದೆ ಸುಮ್ಮನಿದ್ದರು. ಆದರೂ ಮೇಲ್ಜಾತಿಯವರ ಅಮಾನವೀಯ ವರ್ತನೆ, ಶೋಷಣೆ, ವಿರುದ್ಧ ಸಿಡಿದು ವಿರೋಧ ವ್ಯಕ್ತಪಡಿಸಲಾರಂಭಿಸಿದರು. ಈ ಸಂದರ್ಭದಲ್ಲಿ ದಲಿತ ಸಂಘರ್ಷ ಸಮಿತಿ ಹೋರಾಟದ ಪ್ರಭಾವಗಳು ಅಲ್ಲಿ ಪರಿಣಾಮ ಬೀರಿ ಮೂಢನಂಬಿಕೆ, ಅಸ್ಪೃಶ್ಯತೆಯನ್ನು ಉಗ್ರವಾಗಿ ಖಂಡಿಸಿ ತಕ್ಕ ಮಟ್ಟಿನ ಹಕ್ಕುಗಳನ್ನು ಪಡೆಯುವಲ್ಲಿ ಸಫಲರಾದರು. ಹೀಗೆ ಪ್ರಾರಂಭವಾದ ಇವರ ಹೋರಾಟ ಇಂದಿಗೂ ದಲಿತ ಸಂಘರ್ಷ ಸಮಿತಿ (ಭೀಮವಾದ)ಯ ರಾಜ್ಯ ಸಂಘಟನಾ ಸಂಚಾಲಕರಾಗಿ ಕಾರ್ಯನಿರ್ವಹಿಸುತ್ತ ಚಳವಳಿಯಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

೮. ಶಾಮರಾವ್ ಘಾಟಗೆ:

ವಿದ್ಯಾವಂತ ಯುವಕರಿಗೆ ಸರಕಾರಿ ನೌಕರಿ ಸಿಕ್ಕರೆ ಸಾಕು ತಮ್ಮ ಜೀವನ ರೂಪಿಸಿಕೊಂಡು ತಮ್ಮ ಪಾಡಿಗೆ ತಾವು ಇರುತ್ತಾರೆ. ಚಳವಳಿ, ಹೋರಾಟ ಎಂಬ ಗೋಜಿಗೆ ಹೋಗುವುದು ಕಡಿಮೆ. ಆದರೆ ಕೆ.ಎಸ್.ಆರ್.ಟಿ.ಸಿ. ನಲ್ಲಿ ನೌಕರಿ ಮಾಡುತ್ತಿದ್ದು ದಲಿತ ಚಳವಳಿಯ ಪ್ರಭಾವದಿಂದ ನೌಕರಿಗೆ ರಾಜೀನಾಮೆ ಕೊಟ್ಟು ತಮ್ಮನ್ನು ಸಂಪೂರ್ಣವಾಗಿ ಇದರಲ್ಲಿ ತೊಡಗಿಸಿಕೊಂಡವರು ಶಾಮರಾವ್ ಘಾಟಗೆ. ಚಂದ್ರಗುತ್ತಿ ಬೆತ್ತಲೆ ಸೇವೆ ವಿರುದ್ಧದ ಹೋರಾಟ ಇವರನ್ನು ದಲಿತ ಚಳವಳಿಗೆ ಬರುವಂತೆ ಮಾಡಿತು. ಜಮಖಂಡಿ ತಾಲ್ಲೂಕಿನವರಾದ ಇವರು ತಾಲ್ಲೂಕಿನ ಸುತ್ತ-ಮುತ್ತಲಿನ ಹಳ್ಳಿಗಳಲ್ಲಿ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಖಂಡಿಸುತ್ತಾ ಯುವಕರನ್ನು ಸಂಘಟಿಸಿದ ಇವರನ್ನು ಉತ್ತಮ ಸಂಘಟನಾಕಾರರು ಎಂದು ಹೇಳಬಹುದು. ದಲಿತರ ಶಿಕ್ಷಣ, ಮೂಲಭೂತ ಸೌಕರ್ಯ, ಕ್ರೀಡೆ ಮುಂತಾದ ಹಲವು ಕಾರ್ಯಕ್ರಮಗಳ ಮೂಲಕ ಸಕ್ರಿಯವಾದ ಹೋರಾಟಗಳನ್ನು ಮಾಡಿದರು. ಜಿಲ್ಲೆಯಲ್ಲಿ ತಾಂಡವವಾಡುತ್ತಿರುವ ದೇವದಾಸಿ ಪದ್ಧತಿ, ನೀರು ಓಕಳಿ ಪದ್ಧತಿಗಳ ವಿರುದ್ಧ ಉಗ್ರವಾಗಿ ಪ್ರತಿಭಟಿಸಿ ಅವುಗಳು ಸಂಪೂರ್ಣವಾಗಿ ನಿಲ್ಲುವಂತೆ ಮಾಡಿದವರಲ್ಲಿ ಇವರು ಒಬ್ಬರಾಗಿದ್ದಾರೆ. ದಲಿತ ಚಳವಳಿಯ ಉಚ್ಛ್ರಾಯ ಕಾಲದಲ್ಲಿ ಉತ್ಸಾಹದಿಂದ ಹೋರಾಡಿದ ಇವರು ಇತ್ತೀಚಿನ ದಿನಗಳಲ್ಲಿ ಆಗುತ್ತಿರುವ ದಲಿತ ಸಂಘರ್ಷ ಸಮಿತಿ ಒಡಕನ್ನು ತಪ್ಪಿಸುವಲ್ಲಿ ವಿಫಲರಾಗಿದ್ದಾರೆ ಎಂದು ಹೇಳಬಹುದು. 'ಒಗ್ಗಟ್ಟಿನಲ್ಲಿ ಬಲವಿದೆ' ಎಂಬ ಸತ್ಯವನ್ನು ಅರಿತರೂ ದಲಿತರಲ್ಲಿ ಆಗುತ್ತಿರುವ ಬಿರುಕನ್ನು ತಡೆಗಟ್ಟುವಲ್ಲಿ ಇವತ್ತಿನ ನಾಯಕರು ಸೋತಿದ್ದಾರೆ ಎಂದರೆ ತಪ್ಪಾಗಲಾರದು.

೯. ರಾಜು ಮೇಲಿನಕೇರಿ:

ಜಿಲ್ಲಾ ದಲಿತ ಹೋರಾಟಗಾರರಲ್ಲಿ ರಾಜು ಮೇಲಿನಕೇರಿ ಸಹ ಒಬ್ಬರು. ವಿದ್ಯಾರ್ಥಿ ದೆಸೆಯಿಂದಲೇ ದಲಿತ ಚಳವಳಿಯಲ್ಲಿ ಭಾಗವಹಿಸಿದ್ದರು. ದಲಿತರಿಗಾಗಿ ಈ ಸಮಾಜ ವಿಧಿಸಿದ ಕಟ್ಟುಪಾಡುಗಳನ್ನು ಧಿಕ್ಕರಿಸಿದರು. ಹಳ್ಳಿಯಲ್ಲಿನ ಯುವಕರನ್ನು ಸಂಘಟಿಸಿ ಹೋರಾಟದ ಕಿಚ್ಚನ್ನು ತುಂಬಿ ದಲಿತ ಸಮುದಾಯದ ಮೇಲೆ ಹೇರಿದ ನಿರ್ಬಂಧಗಳನ್ನು ಕಿತ್ತು ಹಾಕಲು ಪ್ರೇರಣೆ ನೀಡಿದವರು ರಾಜು ಎಂದು ಹೇಳಬಹುದು. ದಲಿತ ಹೆಣ್ಣುಮಕ್ಕಳ ಅತ್ಯಾಚಾರ ವಿರುದ್ಧ ಉಗ್ರವಾಗಿ ಹೋರಾಡಿದರು. ದಲಿತರಿಗೆ ಮುಖ್ಯವಾಗಿ ಬೇಕಾಗಿರುವುದು ಶಿಕ್ಷಣ. ವಿದ್ಯೆಯಿಂದ ಮಾತ್ರ ಅವರು ಜಾಗೃತಗೊಳ್ಳಲು ಸಾಧ್ಯವೆಂದು ಅರಿತುಕೊಂಡು ತಮ್ಮ ಮಕ್ಕಳಿಗೆ ಶಿಕ್ಷಣ ಒದಗಿಸುವಲ್ಲಿ ಮುಂದಾಗಬೇಕು ಎಂದು ಕರೆಕೊಟ್ಟರು. ಅನೇಕ ಕಾರ್ಯಕ್ರಮ ಹಮ್ಮಿಕೊಳ್ಳುವುದರ ಮೂಲಕ ದಲಿತರಿಗೆ ಪ್ರಜ್ಞೆ ಮೂಡಿಸುವಲ್ಲಿ ಸತತ ಪ್ರಯತ್ನ ಪಟ್ಟರು ಮತ್ತು ಇಂದಿಗೂ ದಲಿತ ಸಂಘರ್ಷ ಸಮಿತಿಯಲ್ಲಿ ತಮ್ಮನ್ನು ಸಕ್ರಿಯಗೊಳಿಸಿಕೊಂಡು ಕಾರ್ಯಪ್ರವೃತ್ತರಾಗಿದ್ದಾರೆಂಬುದು ಗಮನಾರ್ಹ.

ಶ್ರೀಶೈಲ ಚಲವಾದಿ, ನಾರಾಯಣ ಹಲಸಪ್ಪಗೋಳ, ಆನಂದ ದೊಡ್ಡಮನಿ, ಡಿ.ಬಿ. ಮುದೂರು, ಸಿದ್ದು ಮೀಶಿ, ಮಹದೇವ ಹಾದಿಮನಿ, ಎಚ್.ಎನ್.ನೀಲನಾಯ್ಕ, ಗೋವಿಂದ ಹುಗ್ಗಿ, ಶ್ಯಾಮ ಮುಧೋಳ, ಹಣಮಂತ ಚಿಮ್ಮಲಗಿ ಮುಂತಾದ ಹೋರಾಟಗಾರರು ದಲಿತ ಸಂಘರ್ಷ ಸಮಿತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ಎಲ್ಲಾ ನಾಯಕರು ಬಣಗಳಲ್ಲಿ ಹಂಚಿಹೋಗಿದ್ದು ತಮ್ಮ ತಮ್ಮ ನಡುವಿನ ಭಿನ್ನಾಭಿಪ್ರಾಯ ಮರೆತು ದಲಿತ ವಿಮೋಚನೆಗಾಗಿ ಒಂದಾಗಿ ಹೋರಾಡುವ ಅವಶ್ಯಕತೆ ಇರುವುದು ಗಮನಿಸಬಹುದಾದ ಅಂಶವಾಗಿದೆ.

**ಅಡಿಟಿಪ್ಪಣಿಗಳು**

೦೧. ಲಕ್ಷ್ಮಣ್ ತೆಲಗಾವಿ, ೧೯೯೯, ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೭೮

೦೨. ಅದೇ, ಪು.೭೬

೦೩. ಅದೇ, ಪು.೭೬

೦೪. ವಿರೂಪಾಕ್ಷಿ ಪೂಜಾರಹಳ್ಳಿ, (ಸಂ) ೨೦೦೫, ದಲಿತರು ಮತ್ತು ಚರಿತ್ರೆ, (ಲೇ) ಪೋತೆ ಎಚ್.ಟಿ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೯

೦೫. ಪೋತೆ.ಎಚ್.ಟಿ, ಜಗನ್ನಾಥ ಸಿಂಧೆ., ೨೦೦೫, ಬಿ.ಶ್ಯಾಮಸುಂದರ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ಪು.೬೫

೦೬. ಪುರುಷೋತ್ತಮ ಬಿಳಿಮಲೆ, ೧೯೯೦, ಬಂಡಾಯ-ದಲಿತ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು.೨೧

೦೭. ಚಿನ್ನಸ್ವಾಮಿ ಸೋಸಲೆ ಎನ್., ೨೦೦೬, ಪ್ರಭುತ್ವ ಮತ್ತು ದಲಿತರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೩೯

೦೮. ತಂಬಂಡ ವಿಜಯ್ ಪೂಣಚ್ಚ, (ಪ್ರ.ಸಂ)., ೨೦೦೧, ಚರಿತ್ರೆ ವಿಶ್ವಕೋಶ, ಸಂಪುಟ-೪, ದಲಿತ ಚಳವಳಿ-೧ (ಲೇ) ದಯಾನಂದ ಮಾನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೮೨೭

೦೯. ವೀರಯ್ಯ.ಡಿ.ಎಸ್., ೨೦೦೫, ದಲಿತ ಚಿಂತನೆ, ಸ್ವಪ್ನ ಬುಕ್‌ಹೌಸ್, ಬೆಂಗಳೂರು ಪು.೧೦೦

೧೦. ಪೋತೆ.ಎಚ್.ಟಿ., ೨೦೦೪, ದಲಿತಾಂತರಂಗ, ತಿಪ್ಪಣ್ಣಂಬು ಪ್ರಕಾಶನ, ಗುಲಬರ್ಗಾ, ಪು.೩೩

೧೧. ಅದೇ, ಪು.೩೫

೧೨. ಪ್ರಜಾವಾಣಿ ದಿನಪತ್ರಿಕೆ, ದಿ.೦೨.೧೦.೧೯೯೮

* * *

ಅಧ್ಯಾಯ ಮೂರು

# ದಲಿತ ಚಳವಳಿಯ ಸ್ವರೂಪ

೩.೧. ಭೂಮಿಗಾಗಿ ಹೋರಾಟ

೩.೨. ನೀರಿಗಾಗಿ ಹೋರಾಟ

೩.೩. ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ

೩.೪. ರಾಜಕೀಯ ಸ್ಥಾನಕ್ಕಾಗಿ ಹೋರಾಟ

## ಅಧ್ಯಾಯ ಮೂರು

## ದಲಿತ ಚಳವಳಿಯ ಸ್ವರೂಪ

ದಲಿತ ಎಂಬ ಪರಿಕಲ್ಪನೆಯ ಬಗೆಗೆ ಹಲವು ಚಿಂತಕರು, ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ಅರ್ಥೈಸುತ್ತಾರೆ. ಪ್ರಾರಂಭದಲ್ಲಿ ತುಳಿತಕ್ಕೆ ಒಳಗಾಗಿ, ಶೋಷಿತರಾಗಿ ಬದುಕುತ್ತಿದ್ದವರನ್ನು ಅಸ್ಪೃಶ್ಯರೆಂದು ವ್ಯಾಖ್ಯಾನಿಸಲಾಗಿತ್ತು. ಆದರೆ ಕಾಲಗತಿಸಿದಂತೆ 'ದಲಿತ' ಎಂಬ ಪದವು ಪುನರ್ ವ್ಯಾಖ್ಯಾನಕ್ಕೆ ಒಳಗಾಯಿತು. ದಲಿತ ಚಳವಳಿ ಎಲ್ಲ ಬಡಜನರ ಚಳವಳಿಯಾಗಬೇಕು. ಅಂದರೆ ಎಲ್ಲಾ ಮತಧರ್ಮದಲ್ಲಿರುವ ಬಡವರು ಎಂದು ಸ್ಪಷ್ಟಪಡಿಸಿದರು. ಸಮಾಜದಲ್ಲಿ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಅತ್ಯಂತ ಶೋಷಿತ ಸಮುದಾಯಗಳನ್ನು 'ದಲಿತ'ರೆಂದು ಹಲವು ವಿದ್ವಾಂಸರು ಗ್ರಹಿಸುತ್ತಾರೆ.

ದಲಿತ ಸಂಘರ್ಷ ಸಮಿತಿ ಮತ್ತು ಸಂವಿಧಾನದಲ್ಲಿ ಹೇಳುವಂತೆ ಅಸ್ಪೃಶ್ಯರು ಮತ್ತು ಜಾತಿಯಿಂದ ಅವಮಾನಿತರಾದವರು ದಲಿತರು. ಇವರು ಶತಮಾನಗಳಿಂದ ಸವರ್ಣೀಯರ ಗುಲಾಮರಾಗಿಯೇ ಜೀವನ ಸಾಗಿಸುತ್ತಾ ಬಂದವರಾಗಿದ್ದರಿಂದ ಈ ಚಳವಳಿ ಸಾಮಾಜಿಕ ಹಕ್ಕುಗಳಿಗಾಗಿ ಹೋರಾಡುವ ಅನಿವಾರ್ಯತೆಯನ್ನು ಸೃಷ್ಟಿಸಿತು. ಏಕೆಂದರೆ ಭೂ ಮಾಲೀಕರು, ಶ್ರೀಮಂತರು ಸಾಮಾಜಿಕ ಅಂತರವನ್ನು ಬಹು ಜಾಣ್ಮೆಯಿಂದ ಇವರಿಂದ ಕಾಪಾಡಿಕೊಂಡು ಬಂದಿದ್ದಾರೆ. ಇಂಥ ಅಂತರ, ತಾರತಮ್ಯವನ್ನು ಸಂಪೂರ್ಣವಾಗಿ ತೊಡೆದು ಹಾಕುವುದೇ ದಲಿತ ಸಂಘರ್ಷ ಸಮಿತಿಯ ಹೋರಾಟದ ಉದ್ದೇಶವಾಗಿದೆ. ಸಮಾಜದಲ್ಲಿರುವ ಕೆಲವೊಂದು ಅನಿಷ್ಟ ಪದ್ಧತಿಗಳಾದ ಜಾತಿ ಪದ್ಧತಿ, ಧಾರ್ಮಿಕ ಮೌಢ್ಯತೆ, ರಾಜಕೀಯ ಅಂಧಕಾರ ಮುಂತಾದ ರಚನೆಯನ್ನು ಬದಲಾಯಿಸದ ಹೊರತು ಸಮಾಜದಲ್ಲಿನ ಅನಿಷ್ಟತೆಗಳನ್ನು ನಿವಾರಿಸಲು ಸಾಧ್ಯವಿಲ್ಲ ಎಂದು ಅರಿತುಕೊಂಡು ದಲಿತ ವಿದ್ಯಾವಂತ ಚಿಂತಕರು ಸಾಮಾಜಿಕ ಸ್ವರೂಪದ ಬದಲಾವಣೆಗಾಗಿ ಚಳವಳಿ ಮಾರ್ಗ ಹಿಡಿದು ಸಂಘಟನೆಯೊಳಗೆ ಒಂದು ಗೂಡಿ, ಸಾಮಾಜಿಕ ಸ್ಥಿರೀಕರಣ ಹೋಗಲಾಡಿಸಲು ಪ್ರಯತ್ನಿಸಿದರು. ಈ

ನಿಟ್ಟಿನಲ್ಲಿ ದಲಿತ ಸಂಘರ್ಷ ಸಮಿತಿ ರೂಪಿಸಿದ ಕಾರ್ಯಕ್ರಮಗಳಾದ ಭೂಮಿಗಾಗಿ, ನೀರಿಗಾಗಿ, ಸಾಮಾಜಿಕ ರಾಜಕೀಯ ಸಮಾನತೆಗಾಗಿ ಕೈಗೆತ್ತಿಕೊಂಡ ಹೋರಾಟಗಳು ಗಮನಾರ್ಹ ಸಂಗತಿಯಾಗಿವೆ. ಈ ರೀತಿಯ ಚಳವಳಿ ನಾಡಿನಾದ್ಯಂತ ಪಸರಿಸಿತು. ಅದೇ ರೀತಿ ಬಾಗಲಕೋಟೆ ಜಿಲ್ಲೆಯಲ್ಲಿ ನಡೆದ ಇಂತಹ ಹೋರಾಟಗಳನ್ನು ಸಹ ಈ ಕೆಳಗಿನಂತೆ ಗುರುತಿಸಲಾಗಿದೆ.

**೩.೧. ಭೂಮಿಗಾಗಿ ಹೋರಾಟ**

ದಲಿತ ಚಳವಳಿ ಭೂಮಿ ಪ್ರಶ್ನೆಯನ್ನು ಪ್ರಧಾನವಾಗಿ ತೆಗೆದುಕೊಂಡು ಹೋರಾಟ ಮಾಡಿದೆ. ದಲಿತರು ಆರ್ಥಿಕವಾಗಿ ತುಂಬ ಬಡವರಾಗಿದ್ದು, ಅನಾಧಿಕಾಲದಿಂದಲೂ ಇವರನ್ನು ಕೂಲಿಗಳೆಂದು ಪರಿಗಣಿಸಿ ಗುಲಾಮರಂತೆ ದುಡಿಸಿಕೊಂಡಿರುವ ಈ ಸಮಾಜ ಅವರಿಗೆ ಸ್ವಂತ ಆಸ್ತಿ ಹೊಂದುವ ಅವಕಾಶಗಳನ್ನು ಮಾಡಿಕೊಟ್ಟಿಲ್ಲ. ಸಾಮಾಜಿಕ ವ್ಯವಸ್ಥೆಯಲ್ಲಿ ಅಧಿಕಾರ ಹೊಂದಿರುವ ಮೇಲ್ವರ್ಗದವರು ಕೆಳಜಾತಿಗಳನ್ನು ತೀರಾ ಕನಿಷ್ಟವಾಗಿ ಕಾಣುವುದಲ್ಲದೆ ತಾವೇ ಎಲ್ಲ ಸಂಪತ್ತಿನ ಒಡೆಯರಾದರು. ದಲಿತರ ಮೇಲಿನ ದೌರ್ಜನ್ಯಗಳನ್ನು ತಡೆಗಟ್ಟಬೇಕಾದರೆ ದಲಿತ ಚಳವಳಿಯ ಮುಖ್ಯ ಚಿಂತನೆ ಭೂಮಿ ಹಂಚಿಕೆ, ಸಾಮಾಜಿಕ ಸಮಾನತೆ ಈ ಎರಡನ್ನೂ ದಲಿತರಿಗೆ ತಂದುಕೊಡುವುದಕ್ಕೆ ಹೋರಾಟಗಳನ್ನು ಮಾಡುತ್ತಾ ಬಂದಿವೆ. ದಲಿತರ ಮೂಲ ಸಮಸ್ಯೆ ಭೂಮಿ ಆಗಿದ್ದು ಖಾಸಗಿ ಒಡೆತನ ಹೊಂದಬಹುದಾದ ಆಸ್ತಿಯಾಗಿದೆ. ಭೂಮಿ ಹೊಂದುವುದರಿಂದ ಗುಲಾಮಗಿರಿ, ಜೀತಗಾರಿಕೆ, ದಬ್ಬಾಳಿಕೆಯಿಂದ ಮುಕ್ತಿ ಹೊಂದಬಹುದು. ರಾಷ್ಟ್ರೀಯ ಸಂಪತ್ತಾದ ಭೂ ಒಡೆತನ ಯಾರ ಕೈಯಲ್ಲಿ ಕೇಂದ್ರಿಕೃತಗೊಂಡಿವೆ ಎಂಬುದಕ್ಕೆ ಹೆಚ್ಚಿನ ಗಮನಕೊಟ್ಟು ದಲಿತ ಚಳವಳಿ ಭೂ ಹಂಚಿಕೆ ಆಗಬೇಕೆಂದು ತೀವ್ರತರ ಹೋರಾಟಗಳನ್ನು ಆರಂಭಿಸಿತು. ದಲಿತರು ಭೂಮಿ ಆಧಾರಿತ ಜೀವನಕ್ರಮವನ್ನು ಹೆಚ್ಚಾಗಿ ಅವಲಂಭಿಸಿದ್ದು ಆರ್ಥಿಕವಾಗಿ ಬಡವರಾಗಿದ್ದಾರೆ, ಮಲಿನವಾಗಿದ್ದಾರೆ, ಧಮನಕ್ಕೊಳಗಾಗಿದ್ದಾರೆ. ಆದ್ದರಿಂದ ಭೂ ಒಡೆತನದ ಪ್ರಶ್ನೆಯನ್ನು ಎಲ್ಲಿಯವರೆಗೂ ಬಿಡಿಸುವುದಿಲ್ಲವೋ ಅಲ್ಲಿಯವರೆಗೂ ಭೂಮಿ ಮೇಲೆ ಆಧಾರಗೊಂಡಿರುವ ಜಾತಿಗಳ ಬಿಡುಗಡೆ ಇಲ್ಲ.[೧] ದಲಿತನಿಗೆ ಭೂಮಿ ದಕ್ಕಿದರೆ ಆತನ ಆದಾಯ ಹೆಚ್ಚಿ ಸ್ವಾಭಿಮಾನಿಯಾಗುತ್ತಾನೆ. ಎಂದು ದಲಿತ ಚಳವಳಿ ಭೂಮಿಗಾಗಿ ಹೋರಾಟ ಮಾಡಿದೆ.

ಕರ್ನಾಟಕದಲ್ಲಿ ದಲಿತರು ದರಖಾಸ್ತು, ಗೋಮಾಳ, ಕೆರೆಯಂಗಳ ಇತ್ಯಾದಿ ಭೂಮಿ ಸಾಗುವಳಿ ಮಾಡಿರುವುದು ಅತ್ಯಲ್ಪ. ಹೀಗೆ ಸಾಗುವಳಿ ಮಾಡಿದ ದಲಿತರ ಮೇಲೆ ಮೇಲ್ಜಾತಿಯ ಭೂಮಾಲೀಕರು ದಬ್ಬಾಳಿಕೆ ನಡೆಸುತ್ತ ಭೂಮಿಯನ್ನು ಕಬಳಿಸುತ್ತಿದ್ದಾರೆ. ಕೆಲವು ಕಡೆ ಮೇಲ್ವರ್ಗದವರು ದಲಿತರ ಭೂಮಿಯನ್ನು ಒತ್ತುವರಿ ಮಾಡಿ ಸಾಗುವಳಿ ಆರಂಭಿಸಿದ್ದಾರೆ. ಇವರ ಈ ಸರ್ವಾಧಿಕಾರಿ ಧೋರಣೆಗೆ ಕಾರಣ ಅವರಿಗಿರುವ ರಾಜಕೀಯ ಬಲ ಎಂದು ಹೇಳಬಹುದು. ಇದರಿಂದಾಗಿ ದಲಿತ ಸಂಘರ್ಷ ಸಮಿತಿ ಲ್ಯಾಂಡ್‌ಗ್ರ್ಯಾಂಟ್

ಕಾನೂನಿನ ಪ್ರಕಾರ ಅಗತ್ಯಕ್ಕಿಂತ ಹೆಚ್ಚು ಭೂಮಿಯನ್ನು ಭೂಹೀನ ದಲಿತರಿಗೆ ಹಂಚಬೇಕೆಂದು ಹೋರಾಟ ಮಾಡಿದರು. ದಲಿತ ಸಂಘರ್ಷ ಸಮಿತಿಯು ನಡೆಸಿದಂಥ ಪ್ರಮುಖ ಭೂಹೋರಾಟಗಳೆಂದರೆ ಸಿದ್ದಿಪುರ ಭೂ ಹೋರಾಟ ೧೯೭೫, ಹೊನ್ನಳ್ಳಿ ಭೂ ಹೋರಾಟ, ಬಿದಿರೆ ಭೂ ಹೋರಾಟ ೧೯೭೬ ಚಾಂದಗೋಡು ಭೂ ಹೋರಾಟ ೧೯೭೯, ಮೆದಕಿನಾಳ ಭೂ ಹೋರಾಟ ೧೯೮೬, ದೇವಲಾಪುರ ಭೂ ಹೋರಾಟ ೧೯೮೩, ಇತ್ಯಾದಿ.

ಸಿದ್ದಿಪುರ ಭೂ ಹೋರಾಟದಿಂದ ೧೯೭೭ ರಲ್ಲಿ 'ಕರ್ನಾಟಕ ಭೂ ಪರಭಾರೆ ನಿಷೇಧ ಕಾಯ್ದೆ ಜಾರಿಗೆ' ಬಂತು. ಇದು ಭೂಹೀನ ದಲಿತರಿಗೆ ಭೂಮಿ ದೊರಕಿಸಿದ್ದು ದಲಿತ ಸಂಘರ್ಷ ಸಮಿತಿ ಭೂ ಹೋರಾಟಗಳಿಗೆ ಸಿಕ್ಕ ಜಯ ಆಗಿದೆ. ದಲಿತ ಸಂಘರ್ಷ ಸಮಿತಿ ಭೂ ಹೋರಾಟಗಳು ರಾಜ್ಯ ಮಟ್ಟದಲ್ಲಿ ಅಷ್ಟೇ ಅಲ್ಲದೆ ಜಿಲ್ಲಾ ಮಟ್ಟದಲ್ಲಿಯೂ ಆಗಿವೆ. ಬಾಗಲಕೋಟೆ ಜಿಲ್ಲಾ ದಲಿತ ಚಳವಳಿಗಳು ಗ್ರಾಮೀಣ ಪ್ರದೇಶದ ಫ್ಯೂಡಲ್ ವ್ಯವಸ್ಥೆಯ ಬೇರುಗಳನ್ನು ಅಲ್ಲಾಡಿಸಿವೆ. ಹಳ್ಳಿಗಳಲ್ಲಿನ ದಲಿತರ ಭೂಮಿಗಾಗಿ ದಲಿತ ಸಂಘರ್ಷ ಸಮಿತಿ ಹೋರಾಟ ಮಾಡಿ ಭೂಮಿ ಪಡೆಯುವಲ್ಲಿ ಯಶಸ್ವಿಯಾಗಿದೆ.

**೧. ಮುಚಕಂಡಿ ಭೂ ಹೋರಾಟ**

ಜಿಲ್ಲಾ ದಲಿತ ಸಂಘರ್ಷ ಸಮಿತಿ ನಡೆಸಿದಂತ ಪ್ರಮುಖ ಭೂ ಹೋರಾಟಗಳೆಂದರೆ ಬಾಗಲಕೋಟೆಯ ಮುಚಕಂಡಿ ಕೆರೆಯ ಬಳಿ ಜಮೀನನ್ನು ಸಾಗುವಳಿ ಮಾಡುತ್ತಾ ಬಂದಿರುವ ದಲಿತ ರೈತರು ಭೂ ಸ್ವಾದೀನದ ಹಕ್ಕನ್ನು ಮಂಜೂರು ಮಾಡಬೇಕೆಂದು ಸತ್ಯಾಗ್ರಹಕ್ಕೆ ಕುಳಿತಿದ್ದರು. ೧೦-೧೫ ವರ್ಷಗಳಿಂದ ಆ ಜಮೀನನ್ನು ಅವರು ಸಾಗುವಳಿ ಮಾಡುತ್ತಿದ್ದರು. ೧೯೬೫-೬೬ ರಿಂದಲೇ ಜಮೀನು ಆಕ್ರಮಿಸಿಕೊಂಡಿರುವ ೨೬೭ ಜನರ ಪೈಕಿ ೧೩೦ ಜನರು ಹರಿಜನರು, ೩೨ ಗಿರಿಜನರು, ೭೮ ಮಂದಿ ಹಿಂದುಳಿದ ವರ್ಗದವರು, ೨೭ ಮಂದಿ ದುರ್ಬಲ ವರ್ಗದವರಿದ್ದರು.[೨] ಅಂದಿನ ಕಂದಾಯ ಸಚಿವರಾಗಿದ್ದ ಬಿ.ಬಸವಲಿಂಗಪ್ಪನವರು ಬೇಡಿಕೆ ನ್ಯಾಯ ಸಮ್ಮತವಾಗಿದ್ದರೆ ಮಂಜೂರು ಮಾಡಲಾಗುವುದು ಎಂದು ಹೇಳಿದರು.

**೨. ಸವನಹಳ್ಳಿ ಗ್ರಾಮದ ಭೂ ಹೋರಾಟ**

(೧೯೮೯) ಸವನಹಳ್ಳಿ ಗ್ರಾಮದ ಮಲ್ಲಪ್ಪ ಮತ್ತು ಗೌರವ್ವ ಕೊಪ್ಪದ ಇವರು ಒಟ್ಟು ಜಮೀನು ೧೩೦ ಎಕರೆ ಇದ್ದು, ಇವರು ತೀರಿಕೊಂಡ ನಂತರ ಯಾರು ವಾರಸುದಾರರು ಇರಲಿಲ್ಲ. ಆದ್ದರಿಂದ ಶ್ರೀಮಂತರಾದ ಈರಗೊಂಡಪ್ಪ ಯಳಗೇರಿ ಅವರು ೧೯೭೪ ರಲ್ಲಿ ತಮಗೆ ಬೇಕಾದ ರೀತಿಯಲ್ಲಿ ಜಮೀನನ್ನು ಸಾಗುವಳಿ ಮಾಡಿಕೊಳ್ಳುತ್ತಾ ಬಂದಿದ್ದಾರೆ. ಹಾಗೂ ಇವರ ಮಗ ಶಂಕ್ರೆಪ್ಪ ೩೬ ಎಕರೆಗೆ ವರದಿ ಕೊಟ್ಟು ಹಸ್ತಾಂತರ ಮಾಡಿದ್ದಾರೆ.[೩] ಇದರ ಬಗ್ಗೆ ಜಿಲ್ಲಾ ದಲಿತ ಸಂಘರ್ಷ ಸಮಿತಿ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿ ಹೆಚ್ಚುವರಿ ಭೂಮಿಯನ್ನು ಪರಿಶಿಷ್ಟ ಜನರಿಗೆ ಹಂಚಬೇಕೆಂದು ಧರಣಿ ಸತ್ಯಾಗ್ರಹ ನಡೆಸಿ ಸುಳ್ಳು ದಾಖಲಾತಿಗಳ

ಮುಖಾಂತರ ಒಂದೂವರೇ ವರ್ಷದಿಂದ ಪರಿಶಿಷ್ಟರಿಗೆ ಅನ್ಯಾಯ ಮಾಡುತ್ತಲಿದ್ದ ಮೇಲ್ವರ್ಗದವರಿಂದ ಭೂಮಿಯನ್ನು ಮರಳಿ ಪಡೆಯುವುದರಲ್ಲಿ ದಲಿತ ಸಂಘರ್ಷ ಸಮಿತಿ ಯಶಸ್ವಿಯಾಯಿತು.

**೩. ನಂದನೂರ ಭೂ ಹೋರಾಟ**

(೧೯೮೯) ಹುನಗುಂದ ತಾಲ್ಲೂಕಿನ ನಂದನೂರ ಗ್ರಾಮದ ಸಂ.ನಂ. ೬೪ರ ಜಮೀನನ್ನು ತಹಶೀಲ್ದಾರರು KLR:NR:79:87: ದಿನಾಂಕ ೯-೯-೧೯೮೭ರ ಪತ್ರದನ್ವಯ ಪರಿಶಿಷ್ಟರಿಗೆ ಮಂಜೂರು ಮಾಡಿದ ನಂತರ ಬಾಗಲಕೋಟೆ ಉಪವಿಭಾಗಾಧಿಕಾರಿಗಳು ಇವರಿಂದ ಕಿತ್ತು ಬೇರೆಯವರಿಗೆ ಲಾವಣಿ ಮಾಡಲಿಕ್ಕೆ ಕೊಡಲಾಗಿದ್ದು, ಇದರಿಂದ ಅನ್ಯಾಯಕ್ಕೊಳಗಾದ ದಲಿತರು ತಹಶೀಲ್ದಾರ ಬಳಿ ಕೇಳಲು ಹೋಗುವಷ್ಟರಲ್ಲಿ ತಹಶೀಲ್ದಾರ ಮಂಜೂರಾತಿ ಆದೇಶವನ್ನು ರದ್ದು ಮಾಡಿ ಪರಿಶಿಷ್ಟರಿಗೆ ದ್ರೋಹ ಎಸಗಿದ್ದಾರೆ ಎಂದು ಜಿಲ್ಲಾ ದಲಿತ ಸಂಘರ್ಷ ಸಮಿತಿ ಆಪಾದಿಸಿತು. ಆಗ ಜಮೀನು ಮಂಜೂರಾದ ದಲಿತರ ಹೆಸರು ಹೀಗಿವೆ.

| ಕ್ರ.ಸಂ. | ಹೆಸರು | ಸ.ನಂಬರ | ಕ್ಷೇತ್ರ |
|---|---|---|---|
| | | | ಎ.ಗು |
| ೧. | ಗ್ಯಾನಪ್ಪ ಚಲವಾದಿ | ೬೪ | ೪.೦೦ |
| ೨. | ಕನಕಪ್ಪ ಚಲವಾದಿ | ೬೪ | ೪.೦೦ |
| ೩. | ದುರಗಪ್ಪ ಚಲವಾದಿ | ೬೪ | ೪.೦೮[೪] |

ಇವರುಗಳಿಗೆ ಅನ್ಯಾಯವಾಗಿದೆ ತಕ್ಷಣ ಇವರೆಲ್ಲರಿಗೂ ನ್ಯಾಯ ದೊರಕಿಸಿಕೊಡಬೇಕೆಂದು ದಲಿತ ಸಂಘರ್ಷ ಸಮಿತಿ ಪ್ರತಿಭಟನಾ ರ್‍ಯಾಲಿ ಮಾಡಿ ಜಮೀನನ್ನು ಹಿಂದೆ ಪಡೆಯುವಲ್ಲಿ ಯಶಸ್ಸು ಕಂಡಿತು.

**೪. ಸಾವಳಗಿ ಭೂ ಹೋರಾಟ**

[೨೯-೩-೧೯೮೯] ಜಮಖಂಡಿ ತಾಲ್ಲೂಕಿನ ಸಾವಳಗಿ ಗ್ರಾಮದಲ್ಲಿ ೧೯೫೬ ರಲ್ಲಿ ದಲಿತರಿಗೆ ನೀಡಲಾದ ಭೂಮಿಯನ್ನು ಅಲ್ಲಿ ಮೇಲ್ಜಾತಿಯ ಜನಾಂಗ ಬಸ್ ನಿಲ್ದಾಣಕ್ಕಾಗಿ ಆಕ್ರಮಿಸುವ ಹುನ್ನಾರದಲ್ಲಿ ತೊಡಗಿತು. ಇದನ್ನು ಅರಿತ ದಲಿತರು ಪೊಲೀಸರಿಗೆ ದೂರು ನೀಡಿ ನ್ಯಾಯ ಒದಗಿಸುವಂತೆ ಕೇಳಿಕೊಂಡರು. ೧೯೫೬ ರಲ್ಲಿ ನೀಡಲಾದ ಭೂಮಿಯನ್ನು ೧೯೬೨ ರಲ್ಲಿ ಅಂದಿನ ತಹಶೀಲ್ದಾರ 'ಡ' ಉತಾರ ಮೇಲೆ 'ಕ್ಯಾನ್ಸಲ್' ಎಂದು ಬರೆದಿದ್ದು ದಲಿತರು ಇದಕ್ಕೆ ತಡೆಯಾಜ್ಞೆ ತಂದಿರುವುದು ಮೇಲ್ವರ್ಗಗಳನ್ನು ಕೆರಳಿಸಿತು. ಮಂಡಲ ಪಂಚಾಯತ್ ಮೂಲಕ ಜಮೀನನ್ನು ಹಿಂದಕ್ಕೆ ಪಡೆಯಲು ಹುನ್ನಾರ ಮಾಡಿದ ಕ್ರಮಗಳ ವಿರುದ್ಧ ಪೊಲೀಸರಿಗೆ ದೂರು ನೀಡಿದರು. ಪೊಲೀಸರು ತೋರಿದ ಔದಾಸೀನ್ಯದಿಂದ ರೋಸಿ ಹೋದ ಪರಿಶಿಷ್ಟರು ಸುಮಾರು ಮೂರು ಸಾವಿರ ಜನಸಂಖ್ಯೆ ಪೊಲೀಸ ಠಾಣೆಯ ಮುಂದೆ ಪ್ರತಿಭಟನೆ ಕೈಗೊಂಡರು. ಅಂಬೇಡ್ಕರ್

ಭವನ ನಿರ್ಮಿಸಲು ನೀಡಲಾಗಿದ್ದ ಭೂಮಿಯನ್ನು ಬಸ್ ನಿಲ್ದಾಣ ನಿರ್ಮಿಸಲು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಮತ್ತೆ ನೀಡಿದ್ದರ ಔಚಿತ್ಯವನ್ನು ಪ್ರಶ್ನಿಸಿ ಅದಕ್ಕೆ ತಡೆಯಾಜ್ಞೆ ತಂದಿದ್ದ ದಲಿತರ ವಿರುದ್ಧ ಸಿಡಿದೆದ್ದ ದಲಿತೇತರರು ಮಾರಕಾಸ್ತ್ರಗಳನ್ನು ಹಿಡಿದು ಸಾವಿರಾರು ಮಂದಿಯೊಡಗೂಡಿ ಪೊಲೀಸ್ ಠಾಣೆ ಮುಂದೆ ಜಮಾಯಿಸಿ ಕಲ್ಲೆಸೆದರು. ಠಾಣೆಯ ಮುಂದೆ ಮೊದಲು ದಲಿತರ ಶಕ್ತಿ ಪ್ರದರ್ಶನವಾದರೆ ಅನಂತರ ದಲೀತೇತರರ ಶಕ್ತಿ ಪ್ರದರ್ಶನವಾಯಿತು. ಆಗ ಸಂಘರ್ಷ ತಪ್ಪಿಸುವ ಉದ್ದೇಶದಿಂದ ಪೋಲೀಸರು ಗಾಳಿಯಲ್ಲಿ ಗುಂಡು ಹಾರಿಸಿ [೨೨-೩-೧೯೮೯] ಜನರನ್ನು ಚದುರಿಸಿದರು." ಈ ಘಟನೆಯ ನಂತರ ಸವರ್ಣೀಯರು ದಲಿತರಿಗೆ ಸಾಮಾಜಿಕ ಬಹಿಷ್ಕಾರ ಹಾಕಿ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದರು. ಇದನ್ನು ಖಂಡಿಸಿ ಜಿಲ್ಲಾ ದಲಿತ ಸಂಘರ್ಷ ಸಮಿತಿಗೆ ಸಂಬಂಧಿಸಿದ ಅಧಿಕಾರಿಗಳಿಗೆ ತಿಳಿಸಿದರೂ ಏನೂ ಪ್ರಯೋಜನವಾಗಲಿಲ್ಲವಾದ ಕಾರಣ ಜಿಲ್ಲೆಯಾದ್ಯಂತ ಉಗ್ರವಾದ ಧರಣಿ ಮಾಡಿ ಸಾಮಾಜಿಕ ನಿಯಮಾವಳಿಗಳನ್ನು ದಿಕ್ಕರಿಸಿ ಕ್ಷೇತ್ರದ ಶಾಸಕರ ವಿರುದ್ಧ ಆಕ್ರೋಶ ವ್ಯಕ್ತಪಡಿಸಿತು. ಈ ಘಟನೆ ವಿಧಾನ ಸಭೆಯಲ್ಲಿ ತೀವ್ರ ಚರ್ಚೆಗೊಳಗಾಗಿ ದಲಿತರಿಗೆ ನ್ಯಾಯ ದೊರಕಿಸಿಕೊಡುವಲ್ಲಿ ಸಫಲವಾಯಿತು ಮತ್ತು ಇದೇ ತಾಲ್ಲೂಕಿನ ಹಿರೇಪಡಸಲಗಿ ಗ್ರಾಮದ ಸ.ನಂ. ೮೮ ರ ೩೫ ಎಕರೆ ಜಮೀನನ್ನು ಬಹುದಿನಗಳಿಂದ ಸಾಗುವಳಿ ಮಾಡುತ್ತಾ ಬಂದಿರುವ ದಲಿತರಿಗೆ ಹಂಚಬೇಕು, ಬೀಳಗಿ ತಾಲ್ಲೂಕಿನ ಹೆರಕಲ್ಲ ಗ್ರಾಮದ ಸುಮಾರು ೧೦೦ ಎಕರೆ ಹೆಚ್ಚುವರಿ ಜಮೀನನ್ನು ದಲಿತರಿಗೆ ಹಂಚಬೇಕು ಎಂದು ದಲಿತ ಸಂಘರ್ಷ ಸಮಿತಿ ಸರಕಾರಕ್ಕೆ ಒತ್ತಾಯಿಸಿತು.

### ೫ ಕೊಣ್ಣೂರು ಭೂ ಹೋರಾಟ

[೨೫-೫-೨೦೦೭] ಜಮಖಂಡಿ ತಾಲ್ಲೂಕಿನ ಕೊಣ್ಣೂರು ಚಿಕ್ಕಗ್ರಾಮ. ಇಲ್ಲಿ ಸ.ನಂ. ೪೩೧ ರ ಜಮೀನನ್ನು ದಲಿತರು ನೂರಾರು ವರ್ಷಗಳಿಂದ ಸಾಗುವಳಿ ಮಾಡುತ್ತಾ ಬಂದಿದ್ದಾರೆ. ಈ ಜಮೀನನ್ನು ಅದೇ ಗ್ರಾಮದ ಅಶೋಕ ದೇಸಾಯಿ ಅವರ ಕುಟುಂಬದ ತಲೆಮಾರಿನವರು ದಲಿತ ಸಮಾಜಕ್ಕೆ ಉಪಭೋಗ ಮಾಡಲು ಕೊಟ್ಟಿದ್ದರು. ಅದರಂತೆ ಸುಮಾರು ೨೦೦ಕ್ಕಿಂತ ಹೆಚ್ಚು ಕುಟುಂಬಗಳು ಅಲ್ಲಿ ವಾಸ ಮಾಡುತ್ತಿದ್ದು ತಮ್ಮ ಎಲ್ಲಾ ಕಾರ್ಯಗಳಿಗೆ ಜಮೀನನ್ನು ಉಪಯೋಗಿಸಿಕೊಂಡು ಬಂದಿವೆ. ಆದರೆ ಅಶೋಕ ದೇಸಾಯಿ ಅವರು ಜಮೀನನ್ನು ಮಾರಲು ಮುಂದಾಗಿರುವ ಕ್ರಮವನ್ನು ವಿರೋಧಿಸಿ' ದಲಿತ ಸಂಘರ್ಷ ಸಮಿತಿಯು ದಲಿತರಿಗೆ ಆಗುತ್ತಿರುವ ಅನ್ಯಾಯವನ್ನು ತಡೆಗಟ್ಟಬೇಕೆಂದು ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿತು.

### ೬. ಹುಲ್ಲಳ್ಳಿ ಭೂ ಹೋರಾಟ

[೧೬-೧೦-೨೦೦೮] ಹುನಗುಂದ ತಾಲ್ಲೂಕಿನ ಹುಲ್ಲಳ್ಳಿ ಗ್ರಾಮದ ಸ.ನಂ. ೫೦ ಕ್ಕೆ ಸಂಬಂಧಿಸಿದಂತೆ ಗದಿಗೆಪ್ಪ ಮಾದರ ಹೆಸರಿನ ಜಮೀನನ್ನು ತಾಲ್ಲೂಕಿನ ತಹಶೀಲ್ದಾರ ಅವರು ಯಾವುದೇ ಆದೇಶವಿಲ್ಲದೇ

ಬೇರೊಬ್ಬರಿಗೆ ಖರೀದಿ ಮಾಡಿಕೊಟ್ಟ ಅವ್ಯವಹಾರ ಮಾಡಿದ್ದಾರೆ. ದಲಿತ ಗದಿಗೆಪ್ಪ, ದ್ಯಾವಪ್ಪ ಮಾದರ ಇವರಿಗೆ ಸ.ನಂ. ೫೦, ರಲ್ಲಿ ೭-೮ ೧೪-ಗುಂ ಭೂಮಿ ನ್ಯಾಯಮಂಡಳಿಯಲ್ಲಿ ಮುಂಜೂರಾಗಿ ಫಾರ್ಮ ನಂ. ೧೦ 'ಡ' ಕ್ಕೆ ದಾಖಲಾಗಿದೆ. ಆದರೆ ತಹಶೀಲ್ದಾರ ಅವರು ಆಯೋಗ ಫಾರ್ಮ ನಂ ೫೦, ಕ್ಕೆ ಸಂಬಂಧಿಸಿದ ಪ್ರಮಾಣೀಕೃತ ಅಲ್ಲದೇ ನಕಲು ಪ್ರತಿಗಳನ್ನು ಹಾಜರುಪಡಿಸಿ ತಪ್ಪು ಮಾಹಿತಿ ನೀಡಿ ವಂಚನೆ ಮಾಡಿದ್ದು[೭] ಅವರ ವಿರುದ್ಧ ಕಠಿಣ ಕ್ರಮ ಜರುಗಿಸಬೇಕು ಮತ್ತು ಗದಿಗೆಪ್ಪ ಅವರಿಗೆ ಆದ ಅನ್ಯಾಯವನ್ನು ಸರಿಪಡಿಸಬೇಕೆಂದು ಜಿಲ್ಲಾ ದಲಿತ ಸಂಘರ್ಷ ಸಮಿತಿ ಲೋಕಾಯುಕ್ತರನ್ನು ಒತ್ತಾಯಿಸಿ ಅವ್ಯವಹಾರವನ್ನು ಬಯಲಿಗೆಳೆಯುವಲ್ಲಿ ಸಫಲವಾಯಿತು.

ಸಮಾಜದಲ್ಲಿ ಆರ್ಥಿಕ, ಸಾಮಾಜಿಕ ಏರು ಪೇರುಗಳು ಕಡಿಮೆಯಾಗಬೇಕಾದರೆ ಭೂಮಿ ಸಮಾನವಾಗಿ ಹಂಚಿಕೆಯಾಗಬೇಕಾಗಿತ್ತು. ಆದ್ದರಿಂದ ಭೂ ಸುಧಾರಣೆ ಕಾಯ್ದೆ ಹೆಚ್ಚುವರಿ ಭೂಮಿ ಮತ್ತು ಕೃಷಿಗೆ ಯೋಗ್ಯವಾದ ಭೂಮಿಯನ್ನು ಭೂಹೀನ ಬಡವರಿಗೆ ಮತ್ತು ದಲಿತರಿಗೆ ಹಂಚುವ ಆಶಯ ಹೊಂದಿತ್ತು. ೧೯೫೨ ರಲ್ಲಿ ಮೈಸೂರು ಗೇಣಿದಾರರ ಕಾಯ್ದೆ ಜಾರಿಗೆ ಬಂದಿತು. ಇದರ ಪ್ರಕಾರ ಗೇಣಿದಾರರನ್ನು ಖಾಯಂಗೊಳಿಸುತ್ತೇವೆ ಎಂದು ಹೇಳಿದ ಕಾನೂನು ಕೆಲವೊಂದು ನಿರ್ಬಂಧನೆಗಳನ್ನು ಹೇರುವುದರ ಮೂಲಕ ಗೇಣಿದಾರರನ್ನು ಕಿತ್ತು ಹಾಕುವುದಕ್ಕೂ ಅನುವು ಮಾಡಿತು.[೮] ೧೯೫೨ ರಲ್ಲಿ ಮೈಸೂರು ಟೆನೆನ್ಸಿ ಕಾಯ್ದೆಯನ್ನು ತಿದ್ದುಪಡಿ ಮಾಡಿ ಕರ್ನಾಟಕ ಸರ್ಕಾರ ಅಕ್ಟೋಬರ್ ೧೯೫೪ ರಲ್ಲಿ ಶಾಸನ ಸಭೆಯಲ್ಲಿ ಠರಾವನ್ನು ಮಂಡಿಸಿತು. ಅದರಂತೆ ರಕ್ಷಿಸಲ್ಪಟ ಗೇಣಿದಾರರು [ಪ್ರೊಟೆಕ್ಟಡ್ ಟೆನೆಂಟ್ಸ್], ರಕ್ಷಿಸಲ್ಪಡದ ಗೇಣಿದಾರರು [ನಾನ್ ಪ್ರೊಟೆಕ್ಟಡ್ ಟೆನೆಂಟ್ಸ್] ಮತ್ತು ಸಾಧಾರಣ ಗೇಣಿದಾರರೆಂದು ವಿಂಗಡಿಸಲಾಯಿತು.''[೯] ರಾಜ್ಯದಲ್ಲಿ ಇಂದಿಗೂ ಭೂ ಸುಧಾರಣೆ ಕಾನೂನಿಗೆ ಒಳಪಡದ ಹಿಡುವಳಿದಾರರು ಇರುವುದನ್ನು ಇಂದಿಗೂ ಕಾಣಬಹುದು. ಅಧಿಕಾರಕ್ಕೆ ಬಂದ ಎಲ್ಲಾ ರಾಜಕೀಯ ಪಕ್ಷಗಳು ಭೂ ಸುಧಾರಣೆ ಜಾರಿಗೆ ತರುವಲ್ಲಿ ನಿರ್ಲಕ್ಷ್ಯ ವಹಿಸಿರುವುದು ಕಂಡುಬರುತ್ತದೆ. ದಲಿತ ಚಳವಳಿಗಳು ಭೂ ಹೋರಾಟವನ್ನು ಪ್ರಧಾನವಾಗಿ ಪ್ರತಿಪಾದನೆ ಮಾಡತೊಡಗಿದ ನಂತರ ಪ್ರಬಲ ವರ್ಗದ ಜನರ ದೌರ್ಜನ್ಯಗಳು ಹೆಚ್ಚಾಗ ತೊಡಗಿದವು.ದಲಿತರು ತಮ್ಮ ಸಂಘಟನಾ ಸಾಮರ್ಥ್ಯದಿಂದ ಸ್ವರಕ್ಷಣೆ ಮಾಡಿಕೊಳ್ಳುವುದರ ಜೊತೆಗೆ ಚಳವಳಿಯನ್ನು ವಿಶಾಲಗೊಳಿಸಿದರು. ಏಕೆಂದರೆ ದಲಿತರು ಆರ್ಥಿಕ ವಿಮೋಚನೆ ಪಡೆಯಬೇಕಿತ್ತು. ಇಲ್ಲದಿದ್ದರೆ ನಿಮ್ನ ವರ್ಗಗಳು ಮುಂದುವರೆಯುವುದು ಸಾಧ್ಯವಿಲ್ಲ. ಅಂತಹ ವಿಮೋಚನೆ ಭೂ ಒಡೆತನದಿಂದ ಮಾತ್ರ ಸಾಧ್ಯವಾಗುತ್ತದೆಂದು ಅದು ಬಲವಾಗಿ ನಂಬಿತ್ತು. ಭೂ ಒಡೆತನ ಕೇವಲ ಸಾಮಾಜಿಕ ಜೀವನೋಪಾಯದ ಸಂಗತಿಯಾಗಿರದೆ ಸಾಮಾಜಿಕ ಅಂತಸ್ತಿನ ಸಂಗತಿ ಕೂಡಾ ಆಗಿತ್ತು ಎಂಬುದನ್ನು ಅಂಬೇಡ್ಕರ ಅವರು ಸಹ ಗಮನಿಸಿದ್ದರು. ಆದ್ದರಿಂದ ಕರ್ನಾಟಕ ದಲಿತ ಸಂಘರ್ಷ ಸಮಿತಿ ಅಂಬೇಡ್ಕರ್‌ರವರ ಚಿಂತನೆಯಲ್ಲಿ ದಲಿತರನ್ನು ಸಂಘಟಿಸಿ ಅವರಿಗೆ ಸಿಗಬೇಕಾದ ಹಕ್ಕುಗಳಿಗಾಗಿ ಅವಿರತವಾಗಿ ಹೋರಾಡುತ್ತಿವೆ.

### ೩.೨. ನೀರಿಗಾಗಿ ಹೋರಾಟ

ಜಗತ್ತಿನಲ್ಲಿಯೇ ಶ್ರೇಷ್ಠವೆಂದು ಹೇಳಿಕೊಳ್ಳುತ್ತಿರುವ ನಮ್ಮ ಸಂಸ್ಕೃತಿ. ಪ್ರತಿಯೊಂದು ಗ್ರಾಮದಲ್ಲೂ ಜಾತಿಗಳ ಆಧಾರದಲ್ಲಿ ಪ್ರತ್ಯೇಕಿಸಲಾಗಿದೆ. ಒಂದು ವರ್ಗವನ್ನು ಊರಿನಿಂದ ಆಚೆ ಇರಿಸಿ ಎಲ್ಲಾ ಸಾಮಾಜಿಕ ಹಕ್ಕುಗಳಿಂದ ವಂಚಿಸಲಾಗಿದೆ. ಆರಾಧಿಸುವ ದೇವರುಗಳು, ಮಾಡುವ ಹಬ್ಬಗಳು, ಕುಡಿಯುವ ನೀರಿನ ವ್ಯವಸ್ಥೆ, ದೇವಾಲಯ ಪ್ರವೇಶ ಎಲ್ಲವೂ ಪ್ರತ್ಯೇಕವಾಗಿ ನಡೆಯಲಾಗುತ್ತಿದೆ. ಮೇಲ್ಜಾತಿಯವರು ತಮ್ಮ ಸ್ವಾರ್ಥಕ್ಕಾಗಿ ಮಾಡಿಕೊಂಡಿರುವ ಕೆಲವು ಕಟ್ಟುಪಾಡುಗಳನ್ನು ಉಲ್ಲಂಘಿಸಿದ ಕೆಳಜಾತಿಯವರ ಮೇಲೆ ದೌರ್ಜನ್ಯಗಳು ಅವಿರತವಾಗಿ ನಡೆಯುತ್ತಿವೆ. ಇಂತಹ ಸಾಮಾಜಿಕ ವ್ಯವಸ್ಥೆಗೆ ಬಲಿಯಾದವರು ಅಸ್ಪೃಶ್ಯರು, ಪ್ರಾಕೃತಿಕ ಸಂಪತ್ತಾದ ನೀರು ಉಪಯೋಗಿಸುವುದರಲ್ಲಿ ಪಂಚಮರಿಗೆ ಅನೇಕ ಕಟ್ಟುಪಾಡುಗಳಿವೆ. ಜಗತ್ತಿನಲ್ಲಿ ಎಲ್ಲೂ ಇಂತಹ ಕಟ್ಟುಪಾಡು ಇರಲಿಕ್ಕಿಲ್ಲ. ಆದರೆ ಪ್ರಜಾಪ್ರಭುತ್ವ, ಜಾತ್ಯತೀತ, ಸಮಾನತೆಯ ದೇಶ ಎಂದು ಕರೆದುಕೊಳ್ಳುವ ಭಾರತದಲ್ಲಿ ಮಾತ್ರ ಇನ್ನೂ ಜಾತೀಯತೆಯು ಜಾರಿಯಲ್ಲಿದೆ. ಇಂತಹ ಅಮಾನುಷ ನಿಯಮಗಳನ್ನು ಮುರಿಯುವುದರ ಮೂಲಕ ಸವರ್ಣೀಯ ವ್ಯವಸ್ಥೆಗೆ ಸವಾಲು ಎಸೆದವರು ಅಂಬೇಡ್ಕರ್‌ರವರು 'ಚೌಡನಕೆರೆ'ಯ ನೀರನ್ನು ಮುಟ್ಟುವ ಮುಖಾಂತರ, ಕಲಾರಾಂ ದೇವಸ್ಥಾನಕ್ಕೆ ಪ್ರವೇಶಿಸುವ ಮುಖಾಂತರ, ಮನುಸ್ಮೃತಿಯನ್ನು ಸುಡುವ ಮುಖಾಂತರ ಹಿಂದೂ ಧರ್ಮದಲ್ಲಿ ಹುಟ್ಟಿದೆ ಆದರೆ ಹಿಂದೂ ಧರ್ಮದಲ್ಲಿ ಸಾಯಲಾರೆ[೧೦] ಎಂದು ಘೋಷಿಸಿ ಹಿಂದೂ ಸಮಾಜವನ್ನು ದಿಕ್ಕರಿಸಿದರು.

ಇಂದಿಗೂ ದಲಿತರು ತಮ್ಮ ಕೆರೆ ಬಾವಿಗಳ ಹೊರತು ಮತ್ಯಾವ ಬಾವಿಯ ಹತ್ತಿರ ಸುಳಿಯುವಂತಿಲ್ಲ. ಹಳ್ಳಿಯ ಕೆರೆ, ಬಾವಿ ಅಥವಾ ಕಾಲುವೆಗಳ ಒಡ್ಡುಗಳ ನೀರನ್ನು ಉಪಯೋಗಿಸುವುದರಲ್ಲಿಯೂ ಅವರಿಗೆ ಅನೇಕ ಅಡೆತಡೆಗಳಿವೆ.[೧೧] ಅಸ್ಪೃಶ್ಯರು ನೀರನ್ನು ಮುಟ್ಟಿದರೆ ಬಾವಿ ಅಥವಾ ಕೆರೆ ನೀರಿಗೆ ಹುಳ ಬೀಳುತ್ತದೆ ಎಂದು ಅವರನ್ನು ಕೆರೆ ಹತ್ತಿರ ಸುಳಿಯಲು ಬಿಡುವುದಿಲ್ಲ. ಅದೇ ಕೆರೆಗೆ ಎಮ್ಮೆ, ನಾಯಿ, ಹಂದಿಗಳಂತಹ ಪ್ರಾಣಿಗಳು ಬಿದ್ದು ಒದ್ದಾಡಿದರೂ ಏನು ಆಗುವುದಿಲ್ಲ. ಆದರೆ ಪ್ರಾಣಿಗಳಿಗಿಂತ ದಲಿತರು ಕೀಳು ಎಂಬ ಮನೋಧೋರಣೆ ತೋರಿಸುತ್ತಿರುವ ಈ ಸಾಮಾಜಿಕ ಸಂಪ್ರದಾಯಕ್ಕೆ ದಲಿತರ ಧಿಕ್ಕಾರ ಇದೆ ಎಂದರೆ ತಪ್ಪಾಗಲಾರದು. ಸಾಹಿತಿಗಳೂ, ಪತ್ರಕರ್ತರೂ ಆದ ಪಾಟೀಲ ಪುಟ್ಟಪ್ಪನವರಿಗೆ ಇತ್ತೀಚಿಗೆ ತಮಗಾದ ಒಂದು ಅನುಭವವನ್ನು ಈ ರೀತಿ ಹೇಳಿಕೊಳ್ಳುತ್ತಾರೆ. ಒಮ್ಮೆ ಚುನಾವಣಾ ಪ್ರಚಾರಕ್ಕಾಗಿ ಧಾರವಾಡ ಜಿಲ್ಲೆಯ ರಾಣಿಬೆನ್ನೂರಿನ ಹಳ್ಳಿಗೆ ಹೋಗಿದ್ದೆ, ಬಿಸಿಲಾದ್ದರಿಂದ ಊರಲ್ಲಿ ಹೊಕ್ಕು ತುಂಬುವ ಬಾವಿಯಲ್ಲಿ ಸ್ನಾನ ಮಾಡುತ್ತಿದ್ದೆವು. ಆಗ ಒಬ್ಬ ಹರಿಜನ ವ್ಯಕ್ತಿ ಬಂದು 'ಒಂದು ಕೊಡ ನೀರು ಹಾಕರಿ' ಎಂದು ಕೇಳಿದ, ಆಗ ನಾನು ಏನಪ್ಪ ನಾವು ನೀರಲ್ಲಿ ಜಳಕಾ ಮಾಡ್ತಾ ಇದ್ದೀವಿ ನೀನು ಇಳಿದು ನೀರು ತುಂಬಿಕೊಂಡರೆ ಏನಾಗುತ್ತದೆ ಬಾ. ಒಳಗಿಳಿದು, ನೀರು ತುಂಬಿಕೊ ಎಂದು ಕರೆದರೆ ಆಗ ಆ ವ್ಯಕ್ತಿ ಸಾಹೇಬರೆ ನೀವು

ಇವತ್ತ ಬಂದೀರಿ ನಾಳೇ ಹೋಗತೀರಿ, ನಾವು ಇಲ್ಲೆ ಕೂಡಿ ಬಾಳಬೇಕು. ಅದಕ್ಕೆ ನಾನು ಬಾವಿ ಒಳಗ ಇಳಿಯೋದಿಲ್ಲ ಎಂದು ಹೇಳಿದ ನನಗೆ ತುಂಬಾ ಬೇಸರವಾಯಿತು[೧೨] ಎಂದು ಹೇಳುತ್ತಾರೆ. ಇಂಥ ಅನಿಷ್ಟ ಪದ್ಧತಿಗಳು ಇಂದಿಗೂ ಆಚರಣೆಯಲ್ಲಿರುವುದು ವಿಷಾಧನೀಯ ಸಂಗತಿಯಾಗಿದೆ. ಅಂತಹ ಕೆಲವು ಘಟನೆಗಳು ಬಾಗಲಕೋಟೆ ಜಿಲ್ಲೆಯಲ್ಲಿಯೂ ನಡೆದಿವೆ. ಅವುಗಳನ್ನು ವಿರೋಧಿಸಿ ದೌರ್ಜನ್ಯಗಳ ಕುರಿತು ಪ್ರಶ್ನಿಸಿದಾಗ ಸಾಮಾಜಿಕ ಬಹಿಷ್ಕಾರಗಳಂಥ ಘಟನೆಗಳು ಜರುಗಿರುವುದು ಈ ಸಮಾಜದ ಜಾತಿವ್ಯವಸ್ಥೆಯ ಕರಾಳ ಮುಖವಾಡವಾಗಿದೆ.

೧೭-೫-೧೯೯೦ರಲ್ಲಿ ಬಿಜಾಪುರ ಜಿಲ್ಲೆಯ ಕಟಗೇರಿ ಗ್ರಾಮದ ಹರಿಜನರಿಗೆ ತೀವ್ರ ನೀರಿನ ತೊಂದರೆ ಉಂಟಾಗಿದ್ದರಿಂದ ಸವರ್ಣೀಯರ ಬಾವಿಯಲ್ಲಿ ನೀರು ತುಂಬಿಕೊಂಡರು. ಇದು ಮಹಾ ಅಪರಾಧ ಎಂದು ತೀರ್ಮಾನಿಸಿದ ಮೇಲ್ಜಾತಿಯವರು ಅಲ್ಲಿನ ದಲಿತರಿಗೆ ಸಾಮಾಜಿಕ ಬಹಿಷ್ಕಾರ ಹಾಕುವ ಶಿಕ್ಷೆ ವಿಧಿಸಿದರು.[೧೩] ಆಧುನಿಕ ಯುಗದ ನಾಗರೀಕ ಸಮಾಜದ ಅನಾಗರೀಕ ವರ್ತನೆಯ ಈ ಘಟನೆಯನ್ನು ಜಿಲ್ಲಾ ಭಾರತೀಯ ದಲಿತ ಪ್ಯಾಂಥರ್ ಖಂಡಿಸಿತು. ಆದರೆ ಈ ಖಂಡನೆಯಿಂದ ಏನು ಉಪಯೋಗ, ಬಹು ಸಂಖ್ಯಾತ ಅಧಿಕಾರಶಾಹಿಗಳು ಮೇಲ್ಜಾತಿಯವರೇ ಆಗಿರುವುದರಿಂದ ಯಾವ ಕಾನೂನು ಶಿಕ್ಷೆ ವಿಧಿಸುತ್ತದೆ? ಬದಲಾಗಿ ಅಲ್ಪಸಂಖ್ಯಾತರಾಗಿರುವ ದಲಿತರೇ ಮಾತುಕತೆಗಳ ಮೂಲಕ ಸಮಸ್ಯೆ ತಿಳಿಗೊಳಿಸಿಕೊಂಡು ಜೀವನ ಸಾಗಿಸಬೇಕಾಗುತ್ತದೆ.

೩-೬-೧೯೯೩ ಮುದ್ದೇಬಿಹಾಳ ತಾಲ್ಲೂಕಿನ ಗರಸಂಗಿ ಗ್ರಾಮದಲ್ಲಿ ಸುಮಾರು ೬೦೦ ಜನಸಂಖ್ಯೆ ಇರುವ ದಲಿತ ಕುಟುಂಬಗಳಿದ್ದು ಅನೇಕ ವರ್ಷಗಳಿಂದಲೂ ಇಲ್ಲಿ ಅಸ್ಪೃಶ್ಯತೆ ಆಚರಣೆಯಲ್ಲಿದೆ. ಇದನ್ನು ಅನುಭವಿಸಿ ಸಹಿಸದ ಕೆಲ ವಿದ್ಯಾವಂತ ದಲಿತ ಯುವಕರು ದೇವಾಲಯ ಪ್ರವೇಶ ಮತ್ತು ಬಾವಿಗಳನ್ನು ಮುಟ್ಟಲು ಮುಂದಾದಾಗ ಸವರ್ಣೀಯರು ಸಾಮಾಜಿಕ ಬಹಿಷ್ಕಾರ ಹಾಕಿದರು.[೧೪] ಆಗ ಜಿಲ್ಲಾ ದಲಿತ ಸಂಘರ್ಷ ಸಮಿತಿ ತೀವ್ರವಾಗಿ ಖಂಡಿಸಿ ಪ್ರತಿಭಟಿಸಿದರು.

ಅಕ್ಟೋಬರ್ ೨೦೦೬ ತೀರಾ ಇತ್ತೀಚಿನ ದಿನಗಳಲ್ಲಿ ಬಸವನಬಾಗೇವಾಡಿಯ ಕಡಕೋಳ ಗ್ರಾಮದ ದಲಿತರು ಕೆರೆ ನೀರು ಮುಟ್ಟಿದರು ಎಂಬ ಕ್ಷುಲ್ಲಕ ಕಾರಣಕ್ಕಾಗಿ ಅಲ್ಲಿನ ಸವರ್ಣೀಯರು ಸಾಮಾಜಿಕ ಬಹಿಷ್ಕಾರ ಹಾಕಿದ್ದನ್ನು ಬಾಗಲಕೋಟೆ ಮತ್ತು ಬಿಜಾಪುರದ ಜಿಲ್ಲಾ ಸಂಘಟನೆಗಳು ಖಂಡಿಸಿದವು. ಇಂತಹ ಘಟನೆಗಳು ದೇಶದ ಉದ್ದಗಲಕ್ಕೂ ಸಹಸ್ರಾರು ಸಂಖ್ಯೆಯಲ್ಲಿ ಜರುಗುತ್ತಿವೆ. ಆದರೆ ಅವುಗಳಿಗೆ ಯಾವುದೇ ಮಾನ್ಯತೆ ಇಲ್ಲದೆ ಸತ್ತು ಹೋಗುತ್ತಿವೆಯೇ ಜಾತಿ ಪದ್ಧತಿ ವ್ಯವಸ್ಥೆ ಬದಲಾವಣೆ ಹೊಂದಿ ಮತ್ತಷ್ಟು ಘೋರವಾಗುತ್ತಿರುವುದು ಸಾಮಾಜಿಕ ವ್ಯವಸ್ಥೆಯ ಅಧೋಗತಿಗೆ ಸಾಕ್ಷಿಯಾಗಿದೆ. ಜಾತಿ ಪದ್ಧತಿ ಮತ್ತು ಸಾಮಾಜಿಕ ನ್ಯಾಯ ಎರಡು ಹಾವು, ಮುಂಗುಸಿ ಇದ್ದಂತೆ. ಒಂದರ ಸಾವಿನಲ್ಲಿ ಮತ್ತೊಂದರ ಉಳಿವಿದೆ. ಹೀಗಿರುವಾಗ ಸಾಮಾಜಿಕ ನ್ಯಾಯದ ಬಗ್ಗೆ ಈ ರಾಷ್ಟ್ರದಲ್ಲಿ ಚಿಂತಿಸುವುದು ಅರ್ಥಹೀನ ಎಂದು ಹೇಳಬಹುದು. ದಲಿತರು ಕುಡಿಯುವ

ನೀರಿಗಾಗಿ ಮೇಲ್ಜಾತಿಯವರಿಂದ ಅನೇಕ ರೀತಿಯ ಹಿಂಸೆಗೆ ಒಳಗಾಗಿದ್ದ ಸನ್ನಿವೇಶಗಳು ಪ್ರಸ್ತುತ ಸಂದರ್ಭದಲ್ಲಿ ಕಾಣುತ್ತೇವೆ. ಅಸ್ಪೃಶ್ಯರು ಯಾವುದೇ ಕೆರೆ, ಬಾವಿ ಹತ್ತಿರ ಬರುವಂತಿಲ್ಲ. ಈ ರೀತಿಯ ವ್ಯವಸ್ಥೆ ಸಮಾಜದಲ್ಲಿ ಇನ್ನೂ ಗಟ್ಟಿಯಾಗಿ ಬೇರೂರಿವೆ. ಇವುಗಳ ವಿರುದ್ಧ ದಲಿತ ಸಂಘರ್ಷ ಸಮಿತಿ ಹೋರಾಟ ಮಾಡುತ್ತಲೇ ಬಂದಿದ್ದರೂ ಪರಿಹಾರ ದೊರಕಿಸುವಲ್ಲಿ ಅದು ವಿಫಲವಾಗಿದೆ.

**೩.೩. ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ**

ಭಾರತ ದೇಶವು ಹಿಂದೂಸ್ಥಾನ ಎಂದು ಕರೆಸಿಕೊಳ್ಳುವುದರ ಮೂಲಕ ಹುಟ್ಟಿಕೊಂಡ ಸಾಮಾಜಿಕ ಅಸಮಾನತೆಯನ್ನು ಈ ರಾಷ್ಟ್ರದಿಂದ ತೊಡೆದು ಹಾಕುವ ಕೆಲಸವನ್ನು ಅನೇಕ ಸಮಾಜ ಸುಧಾರಕರು, ಪ್ರವಾದಿಗಳೂ, ಕ್ರಾಂತಿಕಾರಿಗಳು ಪ್ರಯತ್ನಪಟ್ಟರೂ ಸಹ ಅದು ಅಸಾಧ್ಯ ಎಂಬುದು ಮಾತ್ರ ಸತ್ಯವಾಗಿದೆ. ಜಾತಿ ಬೀಜಗಳಿಂದ ಹುಟ್ಟಿಬೆಳೆದ ಈ ದೇಶದಲ್ಲಿ ಎಷ್ಟೇ ಸುಧಾರಕರು ಹುಟ್ಟಿದರು ಏನು ಆಗದು. ಜಾತಿ-ಜಾತಿಗಳ ಮಧ್ಯೆ, ವರ್ಗ-ವರ್ಗಗಳ ಮಧ್ಯೆ, ಅಂತರವನ್ನು ಕಾಪಾಡಿಕೊಂಡು ಬರುವ ಈ ಸಾಮಾಜಿಕ ವ್ಯವಸ್ಥೆಯನ್ನು ತಿದ್ದಲು ಸಾಧ್ಯವೇ? ಅಲಸ್‌ಡೈರ್ ಅವರ ಪ್ರಕಾರ ಸಾಮಾಜಿಕ ನ್ಯಾಯ ಎಂಬುದು ಒಳಿತು, ನಿಷ್ಪಕ್ಷಪಾತ, ಎಂಬ ಪದಕ್ಕೆ ಸಮಾನವಾದ ಪದವಾಗಿದೆ. ಹಾಗಾದರೆ ಬೇರೆಯವರಿಗೆ ನ್ಯಾಯ ಸಲ್ಲಿಸುವುದು, ಒಳಿತು ಮಾಡುವುದು, ಅವರವರಿಗೆ ತಕ್ಕ ಸ್ಥಾನಮಾನವನ್ನು ನೀಡುವುದು.[೨೫] ಎಂದು ಹೇಳುತ್ತಾರೆ. ಪಂಚಮರನ್ನು ಪ್ರಾಣಿಗಳಿಗಿಂತ ಕಡೆಯಾಗಿ ಕಾಣುತ್ತ, ನಡೆಸಿಕೊಂಡು ಬರುತ್ತಿರುವ ಈ ಸಮಾಜದ ಅನ್ಯೆತಿಕತೆಗೆ ಜಾತಿ ಪದ್ಧತಿ ಕಾರಣವಾಗಿರುವಾಗ ಬೇರೆಯವರಿಗೆ ಹೇಗೆ ತಾನೆ ನ್ಯಾಯ ಸಲ್ಲಿಸಲು ಸಾಧ್ಯವಾಗುತ್ತದೆ. ಜಾತಿ ಹೆಸರಿನಲ್ಲಿ ಅಮಾನುಷವಾಗಿ ವರ್ತಿಸುವ ಇವರು ಅವರವರಿಗೆ ತಕ್ಕ ಸ್ಥಾನಮಾನಗಳನ್ನು ಹೇಗೆ ತಾನೇ ನೀಡುತ್ತಾರೆ. ಈ ಸಾಮಾಜಿಕ ವ್ಯವಸ್ಥೆಯ ಅಧಿಕಾರದ ಹಿಡಿತ ತಮ್ಮ ಕೈಯಲ್ಲಿ ಇರಬೇಕು. ಅದನ್ನು ಸಮನಾಗಿ ಹಂಚಿದರೆ ತಮ್ಮ ದಬ್ಬಾಳಿಕೆ, ಸರ್ವಾಧಿಕಾರ ಕೈಬಿಟ್ಟು ಹೋಗುತ್ತದೆ ಎಂಬ ಭಯ ಅವರನ್ನು ಪ್ರತಿ ಕ್ಷಣ ಕಾಡುತ್ತಿರುತ್ತದೆ ಎಂದು ಅನಿಸುತ್ತದೆ. ಅದಕ್ಕಾಗಿ ಪ್ರಬಲವಾದ ಒಂದು ವರ್ಗ ಶತಾಯಗತಾಯ ಜೀವ ತೇಯುತ್ತಿರುವಾಗ ಸಾಮಾಜಿಕ ಅಸಮತೋಲನವನ್ನು ಹೇಗೆ ಸರಿದೂಗಿಸಲು ಸಾಧ್ಯ.

ಈ ವ್ಯವಸ್ಥೆಯ ವಿರುದ್ಧ ಹೋರಾಡಿದ ರಾಜಾರಾಮ್ ಮೋಹನ್‌ರಾಯ್ ಆಗಲಿ, ಗಾಂಧೀಯವರಾಗಲಿ, ಜ್ಯೋತಿಬಾ ಫುಲೆಯವರಾಗಲಿ, ಈ.ವಿ. ರಾಮಸ್ವಾಮಿ ನಾಯ್ಕರ ಆಗಲಿ, ಬಾಬಾಸಾಹೇಬ್ ಅಂಬೇಡ್ಕರ್ ಅವರಾಗಲಿ ತರಲು ಹೊರಟ ಸುಧಾರಣೆಗಳು ಎಷ್ಟರ ಮಟ್ಟಿಗೆ ಫಲಿತಾಂಶಗಳು ಕಂಡಿವೆ ಎಂಬುದು ಪ್ರಶ್ನಾರ್ಥಕವಾಗಿದೆ.

ಇವರು ಮಾಡಿದ ಹೋರಾಟಗಳೆಲ್ಲವನ್ನು ವಿಫಲಗೊಳಿಸಿದ ವ್ಯವಸ್ಥೆ ಈ ಜಾತಿವ್ಯವಸ್ಥೆ. ಸ್ವಾತಂತ್ರ್ಯ ಚಳವಳಿಯ ಜೊತೆ ಜೊತೆಯಲ್ಲೇ ದಲಿತರ ವಿಮೋಚನೆಯ ಕನಸು ಕಂಡವರು ಹಾಗೂ ಸರ್ವರಿಗೂ

ಸಾಮಾಜಿಕ ನ್ಯಾಯ ಒದಗಿಸಲು ತಮ್ಮದೇ ಆದ ವಿಚಾರಗಳನ್ನು ಮಂಡಿಸಿ ಈ ವ್ಯವಸ್ಥೆಯ ಜಾತಿ ಮುಖವಾಡವನ್ನು ಬ್ರಿಟೀಷರಿಗೆ ಮತ್ತು ಇಡೀ ಸಮಾಜಕ್ಕೆ ಮೊದಲು ಪರಿಚಯಿಸಿದವರು ಅಂಬೇಡ್ಕರ್ ಅವರು, ಇಂಥ ಹೋರಾಟಗಳು ಇಂದಿಗೂ ಪ್ರಸ್ತುತವಾಗಿವೆ.

ಸಾಮಾಜಿಕ ಅಸಮಾನತೆಗೆ ಘೋರವಾಗಿ ಬಲಿಯಾದವರು ದಲಿತರು, ಸಾಮಾಜಿಕ ನ್ಯಾಯ ಎಂದ ಮಾತ್ರಕ್ಕೆ ಎಲ್ಲ ರೀತಿಯ ಶೋಷಣೆಯಿಂದ ಮುಕ್ತರಾಗುವುದು ಎಂದಲ್ಲ. ಹೊಸ ಮೌಲ್ಯಗಳನ್ನು ಸೃಷ್ಟಿ ಮಾಡುವುದು ಎಂದರ್ಥ. ದಲಿತ ವರ್ಗಗಳ ಅಸಂಘಟನೆ ಮತ್ತು ತಾತ್ವಿಕ ಗೊಂದಲಗಳು ಈ ಸಮುದಾಯಗಳ ಆಂತರಿಕ ಶತೃಗಳಾಗಿವೆ. ದಲಿತರಿಗೆ ತಾವು ಯಾವ ಸೈದ್ಧಾಂತಿಕ ನೆಲೆಯ ಮೇಲೆ ಸಂಘಟಿತರಾಗಬೇಕೆಂಬುದು ಇದುವರೆಗೂ ಸ್ಪಷ್ಟವಿಲ್ಲ. ಅಷ್ಟೇ ಅಲ್ಲ ಸಾಮಾಜಿಕ ನ್ಯಾಯದ ಮಾತು ಹಾಗಿರಲಿ ಅವರಿಗಾಗಿ ನೀಡಲಾದ ಅಥವಾ ಕಾದಿರಿಸಲಾದ ಸಂವಿಧಾನಿಕ ನ್ಯಾಯವನ್ನು ಕೂಡ ಪಡೆದುಕೊಳ್ಳಲು ಅವರಿಗೆ ಸಾಧ್ಯವಾಗಿಲ್ಲ. ಇದು ದಲಿತ ಚಳವಳಿಯ ಸೋಲಿಗೆ ಕಾರಣ ಎಂದು ಅಭಿಪ್ರಾಯಪಡಬಹುದು.

ದಲಿತ ಸಂಘಟನೆಗಳು ದಲಿತರನ್ನು ಜಾಗೃತಗೊಳಿಸುವಂತಹ, ಎಚ್ಚರಗೊಳಿಸುವಂತಹ ಹೋರಾಟಗಳನ್ನು ಮಾಡಬೇಕಾಗಿದೆ. ಸಾಮಾಜಿಕ ಪಿಡುಗುಗಳಾದ ಜಾತಿ ಪದ್ಧತಿ, ಅಸ್ಪೃಶ್ಯತೆ, ಶೋಷಣೆ, ಬಡತನ, ನಿರುದ್ಯೋಗ ಇಂದಿಗೂ ಈ ದೇಶದ ಬಹುದೊಡ್ಡ ಸಮಸ್ಯೆಗಳಾಗಿವೆ. ಇವುಗಳ ನಿರ್ಮೂಲನೆಗಾಗಿ ಪ್ರಬಲವಾದ ಹೋರಾಟಗಳು ಪ್ರಸ್ತುತವಾಗಿವೆ.[೨೧] ಏಕೆಂದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದಲಿತರಿಗೆ ಎಲ್ಲಾ ಹಕ್ಕುಗಳು ಸಿಗುವವು ಎಂಬ ನಂಬಿಕೆ ಹುಸಿಗೊಂಡಿದೆ. ಹಾಗಾಗಿ ದಲಿತರು ತಮ್ಮ ಸಂವಿಧಾನಾತ್ಮಕ ಹಕ್ಕುಗಳಿಗಾಗಿ, ಸಾಮಾಜಿಕ ನ್ಯಾಯಕ್ಕಾಗಿ ಹೋರಾಟದ ದಾರಿ ತುಳಿಯುವುದು ಅನಿವಾರ್ಯವಾಗಿದೆ. ಇಂದಿಗೂ ರಾಜ್ಯದ ಉದ್ದಗಲಕ್ಕೂ ಹಲ್ಲೆ, ಅತ್ಯಾಚಾರ, ಸಾಮಾಜಿಕ ಬಹಿಷ್ಕಾರಗಳಂತಹ ಘಟನೆಗಳು ನಡೆಯುತ್ತಿದ್ದು, ದಲಿತ ಸಂಘರ್ಷ ಸಮಿತಿಯು ಇವುಗಳ ವಿರುದ್ಧ ನಿರಂತರವಾಗಿ ಪ್ರತಿಭಟಿಸುತ್ತಾ ಬಂದಿರುವುದನ್ನು ಕಾಣಬಹುದು.

## ಕೊಲೆ ಪ್ರಕರಣಗಳ ವಿರುದ್ಧ ಹೋರಾಟ

ದಲಿತರ ಮೇಲೆ ನಡೆಸಿದ ಹಲವಾರು ದೌರ್ಜನ್ಯಗಳು, ಕೊಲೆ ಪ್ರಕರಣಗಳು, ಅತ್ಯಾಚಾರಗಳು, ಸಾಮಾಜಿಕ ಬಹಿಷ್ಕಾರಗಳು, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ ವಿರುದ್ಧ ಹಲವು ಹೋರಾಟಗಳನ್ನು ರಾಜ್ಯ ದಲಿತ ಸಂಘರ್ಷ ಸಮಿತಿ ಕೈಗೊಂಡಿದ್ದು ಗಮನಾರ್ಹವಾದವು. ಹಾಗೆ ಕೈಗೊಂಡ ಮುಖ್ಯವಾದ ಹೋರಾಟಗಳೆಂದರೆ ಕೋಲಾರ ಜಿಲ್ಲೆಯ ಹುಣಸೆಕೋಟೆ ಶೇಷಗಿರಿಯಪ್ಪನ ಕೊಲೆ ಪ್ರಕರಣ, ಹೇರೂರು ಕಂಟೆಪ್ಪ ಕೊಲೆ ಪ್ರಕರಣ ಹಾರೋಬನಹಳ್ಳಿ ದುರಗಪ್ಪನ ಕೊಲೆ ಪ್ರಕರಣ, ಬೀಳಗಿ ತಾಲ್ಲೂಕಿನ ಸಿದ್ದರಾಮಪ್ಪ ಚಲವಾದಿ ಕೊಲೆ ಪ್ರಕರಣ[೨೨] ಹಲವು ಕೊಲೆ ಪ್ರಕರಣಗಳ ವಿರುದ್ಧ ರಾಜ್ಯ ದಲಿತ ಸಂಘರ್ಷ ಸಮಿತಿ ಹೋರಾಟ ಮಾಡಿ ಆರೋಪಿಗಳಿಗೆ ತಕ್ಕ ಶಿಕ್ಷೆ ಆಗುವಂತೆ ಮಾಡಿದೆ. ಅದೇ ರೀತಿ ಜಿಲ್ಲಾ ದಲಿತ ಸಂಘರ್ಷ ಸಮಿತಿ ಸಹ

ತನ್ನ ವ್ಯಾಪ್ತಿಯಲ್ಲಿ ದಲಿತರ ಕೊಲೆ ಪ್ರಕರಣಗಳ ವಿರುದ್ಧ ಹೋರಾಟ ಮಾಡಿದೆ. ಮುಖ್ಯವಾದವುಗಳೆಂದರೆ ಮುಧೋಳ ತಾಲ್ಲೂಕಿನ ದಲಿತ ಯುವಕನ ಕೊಲೆ ಪ್ರಕರಣ, ಬದನೂರ ಗ್ರಾಮದ ಹಣಮಂತ ಮಾದರನ ಕೊಲೆ ಪ್ರಕರಣ, ಮುಧೋಳದ ಸಂತೋಷ ನಾಟೀಕಾರ ಕೊಲೆ ಪ್ರಕರಣ, ಶಿರಗುಪ್ಪಿ ಗ್ರಾಮದ ದಲಿತ ಮಹಿಳೆಯ ಕೊಲೆ ಪ್ರಕರಣಗಳ[೧೮] ವಿರುದ್ಧ ಬಾಗಲಕೋಟೆ ಜಿಲ್ಲಾ ದಲಿತ ಸಂಘರ್ಷ ಸಮಿತಿ ಹೋರಾಟಗಳನ್ನು ಮಾಡಿದೆ. ಆದರೆ ಸ್ವಾರ್ಥಿಗಳು, ಅವಕಾಶವಾದಿಗಳು, ಭ್ರಷ್ಟಾಚಾರಿಗಳು ಆಡಳಿತದ ಚುಕ್ಕಾಣಿ ಹಿಡಿದಿರುವುದರಿಂದ ತಮ್ಮ ಎಲ್ಲಾ ತಪ್ಪುಗಳನ್ನು ಮುಚ್ಚಿ ಹಾಕಲು ಸಾಮರ್ಥ್ಯವಿರುವ ಮೇಲ್ವರ್ಗದವರ ಒಳಸಂಚಿನಿಂದ ಕೆಲವು ಪ್ರಕರಣಗಳಿಗೆ ನ್ಯಾಯ ಸಿಕ್ಕಿಲ್ಲ.

**ಸಾಮಾಜಿಕ ಬಹಿಷ್ಕಾರಗಳ ವಿರುದ್ಧ ಹೋರಾಟ**

ಅಸ್ಪೃಶ್ಯತೆ ಮತ್ತು ಸಾಮಾಜಿಕ ಬಹಿಷ್ಕಾರಗಳು. ಹಿಂದೂ ಸಮಾಜದ ಕ್ರೂರ ರೂಪಗಳು ದಲಿತ ಸಂಘರ್ಷ ಸಮಿತಿಯು ಅಸಂಖ್ಯಾ ಸಾಮಾಜಿಕ ಬಹಿಷ್ಕಾರಗಳ ವಿರುದ್ಧ ಹೋರಾಟ ಮಾಡಿದೆ. ಅವುಗಳಲ್ಲಿ ಮುಖ್ಯವಾಗಿ ಅರಬಿಳಚಿ ಗ್ರಾಮ, ಬೀದರ ಜಿಲ್ಲೆಯ ಅಲಗೂಡಿನ ಗ್ರಾಮ, ಟೆಂಗಳ ಗ್ರಾಮ, ಗುಲ್ಬರ್ಗಾ ಜಿಲ್ಲೆ ಅಳಂದ ತಾಲ್ಲೂಕಿನ ಬಟ್ಟರ ಗ್ರಾಮ ಮೊದಲಾದ ಸಾಮಾಜಿಕ ಬಹಿಷ್ಕಾರ ಪ್ರಕರಣಗಳ ವಿರುದ್ಧ ಹೋರಾಡಿದೆ. ಹಾಗೆ ಬಾಗಲಕೋಟೆ ಜಿಲ್ಲೆಯಲ್ಲಿಯೂ ಸಹ ಹಲವಾರು ಅಸ್ಪೃಶ್ಯತೆ ಮತ್ತು ಸಾಮಾಜಿಕ ಬಹಿಷ್ಕಾರ ಪ್ರಕರಣಗಳು ನಡೆದಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಬಿಜಾಪುರ ತಾಲ್ಲೂಕಿನ ಹಂಜಗಿ ಗ್ರಾಮದ ದಲಿತನೊಬ್ಬ ಸವರ್ಣೀಯ ವ್ಯಕ್ತಿಗೆ ಕೈ ತಗುಲಿಸಿದ ಎಂಬ ಕ್ಷುಲ್ಲಕ ಕಾರಣಕ್ಕಾಗಿ ಆ ದಲಿತನ ಮೇಲೆ ದೌರ್ಜನ್ಯ ಮಾಡಲಾಯಿತು (೧೯೮೮), ಜಮಖಂಡಿ ತಾಲ್ಲೂಕಿನ ಕವಟಗಿ ಗ್ರಾಮದ ದಲಿತರ ಮೇಲೆ ಹಲ್ಲೆ, ಕಾಜಿ ಬೀಳಗಿ ಗ್ರಾಮ, ಜಕನೂರು ಗ್ರಾಮ, ಬಾಡಗಂಡಿ ಗ್ರಾಮದ ದಲಿತರ ಮೇಲಿನ ಹಲ್ಲೆ ಪ್ರಕರಣಗಳ ವಿರುದ್ಧ, ಸಂಗೊಂದಿ ಗ್ರಾಮ, ಮೈಗೂರು ಗ್ರಾಮ (೨೦೦೨), ಬಸವನ ಬಾಗೇವಾಡಿ, ಸಿಂದಗಿ, ಮುದ್ದೇಬಿಹಾಳ ಹುನಗುಂದ ತಾಲ್ಲೂಕಿನ (೧೯೮೧) ಕೆಲವು ಹಳ್ಳಿಗಳಲ್ಲಿ ಸಾಮಾಜಿಕ ಬಹಿಷ್ಕಾರ, ಹಲ್ಲೆ, ಅಸ್ಪೃಶ್ಯತೆ ಆಚರಣೆಯ ವಿರುದ್ಧ[೧೯] ಜಿಲ್ಲಾ ದಲಿತ ಸಂಘರ್ಷ ಸಮಿತಿ ಇಂಥ ಹೇಯ ಕೃತ್ಯಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸಬೇಕೆಂದು ಪ್ರತಿಭಟನಾ ಮೆರವಣಿಗೆ ಧರಣಿ ಸತ್ಯಾಗ್ರಹ, ಪಿಕೆಟಿಂಗ್ ಮೊದಲಾದ ಅಹಿಂಸಾ ಅಸ್ತ್ರಗಳನ್ನು ಬಳಸಿ ಯಶಸ್ಸು ಪಡೆದರು.

**ಮಹಿಳಾ ದೌರ್ಜನ್ಯದ ವಿರುದ್ಧದ ಹೋರಾಟ**

ಸಾಮಾಜಿಕ ಅನಿಷ್ಟ ಪದ್ಧತಿಗಳಿಗೆ, ಆಚರಣೆಗಳಿಗೆ ಮೊದಲು ಬಲಿಯಾಗುವವರು ಮಹಿಳೆಯರು, ಅದರಲ್ಲೂ ದಲಿತ ಮಹಿಳೆಯರು ಅಂದರೆ ತಪ್ಪಾಗಲಾರದು. ದೇವರ ಹೆಸರಿನಲ್ಲಿ ನಡೆಯುವ ಅತ್ಯಾಚಾರಗಳು, ಲೈಂಗಿಕ ದೌರ್ಜನ್ಯಗಳಾದ ದೇವದಾಸಿ ಪದ್ಧತಿ, ಬೆತ್ತಲೆ ಸೇವೆ ಇವು ಶ್ರೀಮಂತರು ತಮ್ಮ ಸ್ವಾರ್ಥಕ್ಕಾಗಿ

ನಡೆಸಿಕೊಂಡು ಬಂದಂತಹ ಅನಿಷ್ಟ ಕಂದಾಚಾರಗಳಾಗಿವೆ. ಇಂತಹ ಆಚರಣೆಗಳ ವಿರುದ್ಧ ರಾಜ್ಯದಲ್ಲಿ ದಲಿತ ಸಂಘರ್ಷ ಸಮಿತಿ ಜಾಗೃತಿ ಮೂಡಿಸುವುದಲ್ಲದೆ ಇವುಗಳ ವಿರುದ್ಧ ಹೋರಾಟಗಳನ್ನು ಮಾಡಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಬಾಗೇವಾಡಿ ತಾಲ್ಲೂಕಿನ ಸಿಂದಗೇರಿ ಗ್ರಾಮದ ಹರಿಜನ ಮಹಿಳೆ ಮತ್ತು ಆಕೆಯ ಗರ್ಭಿಣಿ ಪುತ್ರಿಯ ಮೇಲೆ ಅತ್ಯಾಚಾರ (೧೯೭೮), ಹಾಸನ ಜಿಲ್ಲೆಯ ಬೋರಮ್ಮಳ ಮೇಲಿನ ಅತ್ಯಾಚಾರ (೧೯೭೯),[೨೦] ಹುಣಸೇಕೋಟೆ ಅನುಸೂಯಮ್ಮಳ ಮೇಲಿನ ಅತ್ಯಾಚಾರ ವಿರುದ್ಧ (೧೯೮೦), ಶಿವಮೊಗ್ಗದ ಯಶೋಧಮ್ಮ ಅತ್ಯಾಚಾರ ಪ್ರಕರಣದ ವಿರುದ್ಧ,[೨೧] ೧೯೮೫ರಲ್ಲಿ ದೇವದಾಸಿ ಪದ್ಧತಿ ವಿರುದ್ಧ, ೧೯೮೫ ರಲ್ಲಿ ಬೆತ್ತಲೆ ಸೇವೆ ವಿರುದ್ಧ ಹೋರಾಡಿದ್ದು, ರಾಜ್ಯ ದಲಿತ ಚಳವಳಿಯ ಇತಿಹಾಸದಲ್ಲಿ ಮಹತ್ವತೆಯನ್ನು ಪಡೆದಿದೆ.

ಬಾಗಲಕೋಟೆ ಜಿಲ್ಲೆಯ ದಲಿತ ಮಹಿಳೆಯರು ಸಹ ಇಂತಹ ಕ್ರೂರ ಪದ್ಧತಿಗಳಿಂದ ಹೊರತಾಗಿಲ್ಲ. ದೇವದಾಸಿ ಪದ್ಧತಿ, ನೀರು ಓಕಳಿ ಪದ್ಧತಿಗಳಂತಥ ಕ್ರೌರ್ಯಗಳಿಗೆ ದಲಿತ ಮಹಿಳೆಯರು ಬಲಿಯಾಗಿದ್ದಾರೆ. ಮುದ್ದೇಬಿಹಾಳ ತಾಲ್ಲೂಕಿನ ಗುಡಿಹಾಳ ಗ್ರಾಮದ ಮೇಲ್ಜಾತಿ ಯುವಕರು ದಲಿತ ಮಹಿಳೆ ಬಸಮ್ಮಳ ಮೇಲೆ ಅತ್ಯಾಚಾರ ಎಸಗಿದ್ದು ಸವರ್ಣಿಯರ ಹೃದಯ ಹೀನತೆಗೆ ಸಾಕ್ಷಿಯಾಗಿದೆ. ಇಂತಹ ಹಲವು ಘಟನೆಗಳ ವಿರುದ್ಧ ಜಿಲ್ಲಾ ದಲಿತ ಸಂಘರ್ಷ ಸಮಿತಿ ಧರಣಿ ಪ್ರತಿಭಟನೆ ಮಾಡಿದೆ. ಜಿಲ್ಲೆಯ ಜಮಖಂಡಿ, ಮುಧೋಳ, ಬೀಳಗಿ ಮೊದಲಾದ ತಾಲ್ಲೂಕಿನಲ್ಲಿ ಶೇ ೯೫ರಷ್ಟು ದಲಿತರಲ್ಲಿ ಮುಖ್ಯವಾಗಿ ಹೊಲೆಯ ಮಾದಿಗ ಸಮುದಾಯ 'ದೇವದಾಸಿ ಪದ್ಧತಿ' ಮತ್ತು 'ನೀರು ಓಕಳಿ' ಪದ್ಧತಿ ವಿರುದ್ಧ ಜಿಲ್ಲಾ ದಲಿತ ಸಂಘರ್ಷ ಸಮಿತಿ ತೀವ್ರತರ ಹೋರಾಟಗಳನ್ನು ಮಾಡಿ ಅವುಗಳನ್ನು ನಿಷೇಧಿಸುವಲ್ಲಿ ಸಫಲತೆ ಕಂಡಿದೆ.

**'ನೀರು ಓಕಳಿ':** ಇದು ಉತ್ತರ ಕರ್ನಾಟಕದಲ್ಲಿ ರೂಢಿಯಲ್ಲಿರುವ ಸಂಪ್ರದಾಯ, ಸೇವಕ ಸಮುದಾಯದ ಹೆಣ್ಣು ಮಕ್ಕಳು ದೇವದಾಸಿಯರು. ಯಾವ ಸಮುದಾಯಗಳು ಊಳಿಗಮಾನ್ಯ ಪ್ರಭುಗಳಿಗೆ ಸೇವೆಗಳನ್ನು ಒದಗಿಸುತ್ತಿದ್ದಾರೋ ಆ ಸಮುದಾಯದ ಹೆಣ್ಣುಗಳು ದೇವರ ಹೆಸರಿನಲ್ಲಿ ಶ್ರೀಮಂತ ಧಣಿಗಳ ಭೋಗದ ವಸ್ತುಗಳಾಗಿದ್ದಾರೆ. ಇಲ್ಲಿ ದೈವದ ಹೆಸರು ನೆಪಮಾತ್ರ, ಅಸ್ಪೃಶ್ಯ ಮತ್ತು ಸೇವಕ ಸಮುದಾಯಗಳಿಗೆ 'ಹಿಂದೂ ಧರ್ಮ' ವಿಧಿಸಿದ ಕರ್ತವ್ಯಗಳನ್ನು ಅಂಬೇಡ್ಕರ್ ಪಟ್ಟಿಮಾಡಿದ್ದಾರೆ. ಈ ಪಟ್ಟಿಯಲ್ಲಿ ಸೇವಕ ಸಮುದಾಯಗಳು ಕೆಲವು ಉತ್ಸವಗಳ ಸಂದರ್ಭದಲ್ಲಿ ಅಶ್ಲೀಲವಾದ ಮೋಜಿಗೆ ಗುರಿಯಾಗಲು ತಮ್ಮ ಹೆಂಗಸರನ್ನು ಆಳುವ ಧಣಿಗಳ ಮನರಂಜನೆಗೆ ಒದಗಿಸುವುದು ಸೇವಕರ ಕರ್ತವ್ಯಗಳಲ್ಲಿ ಒಂದು. ಓಕಳಿ ಸೇವೆ ಎಂದರೆ ಅಸ್ಪೃಶ್ಯ ವರ್ಗದ ಹೆಣ್ಣುಗಳು ಗ್ರಾಮದ ಒಳಿತಿಗಾಗಿ ಸಲ್ಲಿಸುವ ಒಂದು ಪ್ರಕಾರದ ಸೇವೆ. ಮಾರುತಿ ದೇವರ ಹೆಸರಿನಲ್ಲಿ ನಡೆಯುವ ಉತ್ಸವ ಗುಡಿಯ ಮುಂದಿರುವ ಹೊಂಡದಲ್ಲಿ ನೀರು ತುಂಬಿ ಆ ನೀರನ್ನು ಊರಿನ ಮೇಲ್ವರ್ಗದ ತರುಣರು ಕೆಳ ವರ್ಗದ ಹೆಣ್ಣುಮಕ್ಕಳಿಗೆ ಜೋರಾಗಿ ಎರಚುವುದು ಈ ಓಕಳಿಯ ಪ್ರಮುಖವಾದ ಒಂದು

ಭಾಗ.[೨] ಇಂಥ ಘೋರ ಅನಿಷ್ಠ ಪದ್ಧತಿಗಳನ್ನು ನಿರ್ಬಂಧಿಸುವಲ್ಲಿ ಜಿಲ್ಲಾ ದಲಿತ ಸಂಘರ್ಷ ಸಮಿತಿ ಯಶಸ್ಸು ಕಂಡಿದೆ.

**ದೇವದಾಸಿ ಪದ್ಧತಿ ನಿರ್ಮೂಲನೆ**

ಸುಮಾರು ಹದಿನಾರು ನೂರು ವರ್ಷಗಳ ಇತಿಹಾಸ ಹೊಂದಿರುವ ದೇವದಾಸಿ ಪದ್ಧತಿ ಉತ್ತರ ಕರ್ನಾಟಕದಲ್ಲಿ ಹೆಚ್ಚಿನ ಪ್ರಮಾಣದಲ್ಲಿದೆ ಎಂದು ಹೇಳಬಹುದು. ಇಂತಹ ಅನಿಷ್ಟ ಪದ್ಧತಿಗಳು ಹೆಚ್ಚಾಗಿ, ಪರಿಶಿಷ್ಟ ಮಹಿಳೆಯರನ್ನೇ ಆವರಿಸಿಕೊಂಡಿದೆ. ಕೆಳಜಾತಿಯ ಮಹಿಳೆಯರು ತಮ್ಮನ್ನು ದೇವರಿಗೆ ಅರ್ಪಿಸಿಕೊಂಡು ದೇವರ ಹೆಸರಿನಲ್ಲಿ ವೇಶ್ಯಾವೃತ್ತಿಯನ್ನು ನಡೆಸಬೇಕು. ಇದು ದೇವರ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಶೋಷಣೆ, ದೇವದಾಸಿ ಪದ್ಧತಿಯನ್ನು ಸಮಾಜದ ಮೇಲ್ವರ್ಗದ ಜನರು ಮೊದಲಿನಿಂದಲೂ ಪೋಷಿಸಿಕೊಂಡು ಬಂದಿದ್ದಾರೆ. ಇಂತಹ ಅನಿಷ್ಟ, ಅಮಾನವೀಯ, ಕ್ರೂರ ಪದ್ಧತಿಯ ವಿರುದ್ಧ ಪರಿಶಿಷ್ಟ ಜನರನ್ನು ಜಾಗೃತಗೊಳಿಸಬೇಕಿದೆ. ಸಾಮಾಜಿಕ ಜಾಡ್ಯವಾದ ಇಂತಹ ಪದ್ಧತಿಯನ್ನು ಇತಿಹಾಸ ಕಾಲದಿಂದಲೂ ಹಿಂದೂ ಸಮಾಜ ರಕ್ಷಿಸಿಕೊಂಡು ಬರುತ್ತಿರುವುದು ಖಂಡನಾರ್ಹವಾಗಿದೆ. ಇಂತಹ ಭೀಕರ ಪದ್ಧತಿಯನ್ನು ನಿರ್ಮೂಲ ಮಾಡಲು ಸರಕಾರ ತಡವಾಗಿ ಯೋಚಿಸಿದ್ದು ದಲಿತ ಮಹಿಳೆಯರ ದುರಾದೃಷ್ಟವೆಂದೇ ಹೇಳಬೇಕು. ಕುಕ್ಕಿ ತಿನ್ನುವ ಬಡತನ, ಅನಕ್ಷರತೆ, ಅಜ್ಞಾನದಿಂದ ಪರಿಶಿಷ್ಟ ಜನರು ಇಂಥ ಆಚರಣೆಯನ್ನು ಒಪ್ಪಿಕೊಂಡು ಬರುವಂತೆ ಮಾಡಿದೆ. ಬಾಗಲಕೋಟೆ ಜಿಲ್ಲೆಯಲ್ಲಿ ಈ ಪದ್ಧತಿ ಹೆಚ್ಚಾಗಿ ದಲಿತರಲ್ಲಿಯೇ ಕಂಡುಬರುತ್ತದೆ. ಮುಖ್ಯವಾಗಿ ಹೊಲೆಯ ಮಾದಿಗರಲ್ಲಿ ಇದನ್ನು ಹೆಚ್ಚಾಗಿ ಕಾಣಬಹುದು. ಪರಿಶಿಷ್ಟ ಜಾತಿ ಮತ್ತು ಪಂಗಡದ ಹೆಣ್ಣು ಮಕ್ಕಳು ವಯಸ್ಸಿಗೆ ಬಂದರೆ ಅವರನ್ನು ಸವದತ್ತಿ, ಚಿಂಚಲಿ, ಕೊಕಟನೂರು ಎಲ್ಲಮ್ಮ ದೇವಿಗೆ ಬಿಡುವ ಹರಕೆ ಹೊತ್ತುಕೊಂಡು, ಹುಣ್ಣಿಮೆ, ಜಾತ್ರೆಯ ದಿನದಂದು ದೇವಿಯ ಹೆಸರಿನಲ್ಲಿ ಅವರಿಗೆ ಮುತ್ತು ಕಟ್ಟುತ್ತಾರೆ. ಅಲ್ಲಿಂದ ಅವಳು ದೇವದಾಸಿ ಆಗುತ್ತಾಳೆ. ಮುಂದೆ ಅವಳು ದೇವಿಯ ಹೆಸರಿನಲ್ಲಿ ಭಿಕ್ಷೆ ಬೇಡಿ ಮತ್ತು ವೇಶ್ಯಾವೃತ್ತಿ ಮಾಡಿ ಜೀವನ ಸಾಗಿಸಬೇಕು. ಇಂತಹ ಅಮಾನವೀಯ ಶೋಷಣೆಗೆ ದಲಿತ ಹೆಣ್ಣು ಮಕ್ಕಳೇ ಆಗಬೇಕು ಎಂಬುದು ಹಿಂದೂ ಸಮಾಜದ ಮೇಲ್ಜಾತಿಗಳ ನಿಯಮವಾಗಿದೆ.

ಸಾಮಾಜಿಕ ಅನಿಷ್ಟ ಆಚರಣೆಗಳಿಗೆ, ಜಾತಿ ಕ್ರೌರ್ಯಗಳಿಗೆ ಮೊದಲು ಬಲಿಯಾಗುವವರು ಮಹಿಳೆಯರು. ಅದರಲ್ಲೂ ದಲಿತ ಮಹಿಳೆಯರು ಹೆಚ್ಚು ಪ್ರಮಾಣದಲ್ಲಿ ಬಲಿಯಾಗುತ್ತಾರೆ. ಅತ್ಯಾಚಾರ, ದೈವದ ಹೆಸರಿನಲ್ಲಿ ನಡೆಸುವ ಲೈಂಗಿಕ ದೌರ್ಜನ್ಯಗಳು, ಮುತ್ತು ಕಟ್ಟುವ ದೇವದಾಸಿ ಪದ್ಧತಿ, ಬಸವಿ ಬಿಡುವಿಕೆ, ಬೆತ್ತಲೆ ಸೇವೆ ಇವು ಶ್ರೀಮಂತ ಭೂಮಾಲೀಕರು, ಬಂಡವಾಳ ಶಾಹಿಗಳು ನಡೆಸುವಂತಹ ಭೀಕರ ಕೃತ್ಯಗಳಾಗಿವೆ. ದಲಿತರ ಅಜ್ಞಾನ, ಅಂಧಕಾರ, ಬಡತನವನ್ನು ಶ್ರೀಮಂತರು ಅತ್ಯಂತ ಚಾಣಾಕ್ಷತೆಯಿಂದ ಶೋಷಣೆ ಮಾಡಿ ಧಾರ್ಮಿಕತೆ, ಕಂದಾಚಾರಗಳ ಲೇಪನದೊಂದಿಗೆ ಲೈಂಗಿಕ ವ್ಯಭಿಚಾರ ನಡೆಸಿದ್ದಾರೆ. ಇವುಗಳ ವಿರುದ್ಧ ದಲಿತ ಸಂಘರ್ಷ ಸಮಿತಿ ಹಲವಾರು ಹೋರಾಟಗಳನ್ನು ಮಾಡಿದ್ದನ್ನು ಗಮನಿಸಬಹುದು.

**ಮೂಢ ನಂಬಿಕೆ:** ದೇವಿಗೆ ಹರಕೆ ಹೊತ್ತು ಹೆಣ್ಣು ಮಕ್ಕಳನ್ನು ಸೇವೆಗೆ ಬಿಡದೆ ಹೋದರೆ ಆ ಕುಟುಂಬಕ್ಕೆ ತುಂಬಾ ತೊಂದರೆ ಆಗುತ್ತದೆ. ಇಲ್ಲವೆ ಕುಟುಂಬದಲ್ಲಿ ಸಾವು-ನೋವುಗಳು ಸಂಭವಿಸುತ್ತವೆ ಎಂದು ಮೊದಲಿನಿಂದಲೂ ಮೇಲ್ಜಾತಿ ಸಮುದಾಯಗಳು ಅವರಿಗೆ ನಂಬಿಸಿ ದಲಿತರ ಅಜ್ಞಾನ, ಮುಗ್ಧತೆಯನ್ನು ಜಾಣತನದಿಂದ ಉಪಯೋಗಿಸಿಕೊಂಡಿವೆ. ಎಲ್ಲಮ್ಮ ದೇವಿ ಶ್ರೀಮಂತರಿಗೆ ಮತ್ತು ಮೇಲ್ವರ್ಗದವರಿಗೆ ಏಕೆ ಕಾಡುವುದಿಲ್ಲ? ಎಂಬ ಪ್ರಶ್ನೆಗಳನ್ನು ಸ್ವತಃ ದಲಿತರು ತಮಗೆ ತಾವೇ ಹಾಕಿಕೊಳ್ಳಬೇಕಾಗಿದೆ. ಇವರ ಮೂಢನಂಬಿಕೆಗೆ ಉದಾಹರಣೆ ಹೇಳಬೇಕೆಂದರೆ ಮಹಿಳೆ ಒಬ್ಬಳು ಹೇಳಿಕೊಳ್ಳುವಂತೆ ತಾನು ಚಿಕ್ಕವಳಿದ್ದಾಗ ತುಂಬಾ ಜ್ವರ ಬಂದು ಆಸ್ಪತ್ರೆಗೆ ತೋರಿಸಿದರೂ ವಾಸಿಯಾಗಲಿಲ್ಲ. ಆಗ ಮನೆ ಹತ್ತಿರ ಬಂದ ಜೋಗಮ್ಮ ತನ್ನ ತಾಯಿಗೆ ಹೇಳಿದಳು, ನಿನಗೆ ಒಬ್ಬಳೇ ಮಗಳು, ಅವಳನ್ನು ನೀನು ಉಳಿಸಿಕೊಳ್ಳಬೇಕಾದರೆ ದೇವಿಗೆ ಬಿಡಬೇಕು. ಇದು ದೇವಿಯ ಕಾಟ, ಆಸ್ಪತ್ರೆಯಿಂದ ವಾಸಿಯಾಗುವುದಿಲ್ಲ ಎಂದು ಹೇಳಿದರು. ಇದನ್ನು ನಂಬಿದ ನನ್ನ ತಾಯಿ ನನ್ನನ್ನು ದೇವಿಗೆ ಬಿಟ್ಟಳು ಅಲ್ಲಿಂದ ನಾನು ದೇವದಾಸಿ ಆಗಿದ್ದೇನೆ. (ಮಾಹಿತಿ ಕೊಟ್ಟವರು ಜಮಖಂಡಿ ತಾಲ್ಲೂಕಿನ ನಿರ್ಮಲಾ ಎಂಬ ಮಹಿಳೆ)

ಇದು ಮೂಢನಂಬಿಕೆಯ ಪರಮಾವಧಿ ಎನ್ನಬಹುದು. ದೇವಿಗೆ ಬಿಡುವುದರಿಂದ ವಾಸಿಯಾಗುವ ಕಾಯಿಲೆ ಆಗಿದ್ದರೆ ಆಸ್ಪತ್ರೆಗಳ ಅವಶ್ಯಕತೆಯೇ ಇರಲಿಲ್ಲ. ಶ್ರೀಮಂತ ಮನೆತನದ ಮಹಿಳೆಯರಿಗೆ ಆಸ್ಪತ್ರೆ ಔಷಧಗಳಿಂದ ವಾಸಿಯಾಗುವ ರೋಗ ಬಡಕುಟುಂಬದ ಮಹಿಳೆಯರಿಗೆ ಏಕೆ ಆಗುವುದಿಲ್ಲ ಎಂಬ ಸಾಮಾನ್ಯ ಪ್ರಶ್ನೆಗಳು ನಮ್ಮನ್ನು ಸಹಜವಾಗಿ ಕಾಡುತ್ತವೆ. ಇಂಥ ಪದ್ಧತಿ ಉತ್ತರ ಕರ್ನಾಟಕದ ಬಾಗಲಕೋಟೆ, ಬೆಳಗಾವಿ, ಬಿಜಾಪುರ, ಧಾರವಾಡ, ಬಳ್ಳಾರಿ, ದಾವಣಗೆರೆ ಈ ಎಲ್ಲಾ ಜಿಲ್ಲೆಗಳಲ್ಲಿ ಹರಿಜನ, ಗಂಗಾಮತ, ತಳವಾರ ಹೆಣ್ಣು ಮಕ್ಕಳು ಈ ಸಂಪ್ರದಾಯಕ್ಕೊಳಪಡುವುದು ಸಾಮಾನ್ಯವಾಗಿದೆ.[೨೩]

**ಜಾಗೃತಿ:** ದೇವದಾಸಿ ಪದ್ಧತಿ ಒಂದು ವಿಷಯವರ್ತುಲವಿದ್ದಂತೆ. ಈ ಪದ್ಧತಿ ಅಂತ್ಯಗೊಳ್ಳುವುದನ್ನು ಬಯಸದ ಶಕ್ತಿಗಳು ಸಮಾಜದಲ್ಲಿ ಇನ್ನೂ ಇವೆ. ಈ ಶಕ್ತಿಗಳ ಹಿಡಿತದಿಂದ ಪರಿಶಿಷ್ಟ ಜಾತಿಗಳ ಮಹಿಳೆಯರನ್ನು ಹೊರ ತರಲು ಮುಖ್ಯವಾಗಿ ಬೇಕಾದುದು ಜಾಗೃತಿ. ಇಂಥ ಪದ್ಧತಿಗೆ ಮೇಲ್ವರ್ಗದ ಜನ ಎಷ್ಟರ ಮಟ್ಟಿಗೆ ಕಾರಣವೋ, ಅದಕ್ಕಿಂತ ಹೆಚ್ಚಾಗಿ ದೇವದಾಸಿ ಮಹಿಳೆಯರ ಕುಟುಂಬಗಳೂ ಸಹ ಅಷ್ಟೇ ಕಾರಣವಾಗಿವೆ. ತಂದೆ-ತಾಯಿ ಮತ್ತು ಅಣ್ಣ-ತಮ್ಮಂದಿರು ಆರ್ಥಿಕ ಲಾಭದ ಆಸೆಗೆ ಇವರನ್ನು ಬಲಿಪಶುಗಳಾಗಿ ಮಾಡುತ್ತಿದ್ದಾರೆ. ಆದ್ದರಿಂದ ಇವರಿಗೆ ಅರಿವು ಮೂಡಿಸುವ ಅಗತ್ಯವಿದೆ. ಅದಕ್ಕಾಗಿ ಬಿಜಾಪುರ, ಬಾಗಲಕೋಟೆ ವಿಭಾಗದಲ್ಲಿ ಇಂಥ ಅನಿಷ್ಟ ಪದ್ಧತಿಗಳ ವಿರುದ್ಧ ಹೋರಾಟಗಳು ನಡೆದಿವೆ. ಈ ನಿಟ್ಟಿನಲ್ಲಿ ವಿಜಾಪುರದ ಕಾಕಾ ಕಾಖಾನೀಸ್‌ರು ಕೂಡ ಶ್ರಮಪಟ್ಟಿದ್ದಾರೆ ಎಂಬುದನ್ನು ಮರೆಯುವಂತಿಲ್ಲ. ಹಾಗೆ ದಲಿತ ಸಂಘಟನೆ ಸಹ ಹಲವಾರು ವಿಚಾರ ಸಂಕಿರಣ ಏರ್ಪಡಿಸುವುದರ ಮೂಲಕ ಮಹಿಳೆಯರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಾಡಿದೆ. ದೇವದಾಸಿ ಪದ್ಧತಿ, ನೀರು ಓಕಳಿ ಪದ್ಧತಿಗಳ ವಿರುದ್ಧ ಹೋರಾಡಿ ಅವುಗಳನ್ನು

ತಡೆಗಟ್ಟುವಂತಹ ಕಾರ್ಯಕ್ರಮಗಳನ್ನು ಮಾಡಿ ಸರಕಾರದ ಗಮನ ಸೆಳೆದಿದೆ ಎನ್ನಬಹುದು. ಪ್ರತಿಯೊಂದು ಊರಿನ ಕೇರಿ-ಕೇರಿಗಳಲ್ಲಿ, ಹಟ್ಟಿಗಳಲ್ಲಿ, ಈ ಒಂದು ವ್ಯವಸ್ಥೆಯ ವಿರುದ್ಧ ಹಲವು ಮಹಿಳಾ ಪರ ಸಂಘಟನೆಗಳು, ದಲಿತ ಸಂಘಟನೆಗಳು ಜಾಗೃತಿ ಮೂಡಿಸುವ ಪ್ರಯತ್ನದಲ್ಲಿವೆ.

ದೇವದಾಸಿ ಪದ್ಧತಿ ನಿರ್ಮೂಲನೆಗೆ ಸಂಬಂಧಿಸಿದ ವಿಚಾರ ಸಂಕಿರಣ ಕಾರ್ಯಕ್ರಮ ಒಂದರಲ್ಲಿ ಮಾತನಾಡಿದ ಅಭಿಷೇಕ ಚಕ್ರವರ್ತಿ ಅವರು ಸಮಾಜದ ವಿದ್ಯಾವಂತರು ಮನಸ್ಸು ಮಾಡಿದರೆ ಇದನ್ನು ಅಮೂಲಾಗ್ರವಾಗಿ ಕಿತ್ತೆಸೆಯಬಹುದು. ಚಂದ್ರಗುತ್ತಿಯಲ್ಲಿ ಬೆತ್ತಲೆ ಸೇವೆ ನಿಲ್ಲಿಸಲು ಕ್ರಮ ಕೈಗೊಂಡ ರೀತಿಯಲ್ಲಿ ಸವದತ್ತಿಯಲ್ಲಿ ಎಲ್ಲಮ್ಮನ ಜಾತ್ರೆ ಸಂದರ್ಭದಲ್ಲಿ ದೇವದಾಸಿ ಬಿಡುವ ಪದ್ಧತಿಯನ್ನು ನಿಲ್ಲಿಸಬೇಕು[೨೪] ಎಂದು ಹೇಳಿದರು. ಸರಕಾರ ೧೯೮೨ರ ಕಾಯ್ದೆ ಪ್ರಕಾರ ದೇವದಾಸಿ ಬಿಡುವುದನ್ನು ನಿಷೇಧಿಸಿತು. ದೇವದಾಸಿ ಪದ್ಧತಿಯನ್ನು ಪ್ರೋತ್ಸಾಹಿಸಿದವರಿಗೆ ಮತ್ತು ಆಚರಣೆ ಮಾಡುವವರಿಗೆ ೫ ವರ್ಷ ಜೈಲು ೫೦೦೦ ರೂಪಾಯಿ ದಂಡ ವಿಧಿಸುವುದಾಗಿ ಕಾನೂನು ಜಾರಿಗೆ ತಂದಿತು. ಆದರೂ ಜನ ಅದನ್ನು ಲೆಕ್ಕಿಸದೆ ಈ ಪದ್ಧತಿಯನ್ನು ರಾಜಾರೋಷವಾಗಿ ಆಚರಣೆಗೆ ತರುತ್ತಿರುವುದು ವಿಷಾದದ ಸಂಗತಿಯಾಗಿದೆ.

೧೯೯೩-೯೪ರಲ್ಲಿ ಬಿಜಾಪುರ ಜಿಲ್ಲೆಯಲ್ಲಿ ಸರಕಾರ ದೇವದಾಸಿ ಪುನರ್ ವಸತಿ ಯೋಜನೆಯನ್ನು ಆರಂಭಿಸಿತು. ಇದು ಜಿಲ್ಲೆಯ ದೇವದಾಸಿಯರ ಸಂಖ್ಯೆ ಎಷ್ಟು ಮತ್ತು ಅವರ ಸ್ಥಿತಿಗತಿಗಳ ಬಗ್ಗೆ ಸಮೀಕ್ಷೆ ಮಾಡಿ ಅವರಿಗೆ ಸರಕಾರದ ಸಾಲ ಸೌಲಭ್ಯಗಳನ್ನು ಒದಗಿಸುವುದರ ಮೂಲಕ ಸ್ವಯಂ ಉದ್ಯೋಗದ ತರಬೇತಿಯನ್ನು ನೀಡಿತು. ಒಂದು ಸಂಘಟನೆಯ ಒಳಗೆ ಅವರನ್ನು ಒಟ್ಟುಗೂಡಿಸುವ ಪ್ರಯತ್ನ ಮಾಡಿತು. ಈ ಪ್ರಯತ್ನ ಮೊದಲು ಫಲಕಾರಿಯಾಗಲಿಲ್ಲ. ಏಕೆಂದರೆ ೧೯೯೪ರ ಸರ್ವೆ ಪ್ರಕಾರ ಅವರ ಸಂಖ್ಯೆ ೪೮೦೪ ಮಾತ್ರ ಇತ್ತು. ನಂತರ ೨೦೦೭ರಲ್ಲಿ ಮತ್ತು ಸರ್ವೆ ಮಾಡಿದ ಮೇಲೆ ಅವರ ಸಂಖ್ಯೆ ೮೬೬೨ಕ್ಕೆ ಏರಿತು. ಸರಕಾರ ದೇವದಾಸಿ ಪದ್ಧತಿ ತಡೆಗಟ್ಟಲು ಕೈಗೊಂಡ ಕ್ರಮಗಳು ವಿಫಲವಾಯಿತೆ? ಎಂಬ ಪ್ರಶ್ನೆ ಹುಟ್ಟುವುದು ಸಹಜ. ಇದಕ್ಕೆ ದೇವದಾಸಿ ಪುನರ್ ವಸತಿ ಯೋಜನೆ ಸಿಬ್ಬಂದಿ ಹೇಳುವ ಕಾರಣಗಳೇನೆಂದರೆ,

೧. ದೇವದಾಸಿಯರಿಗೆ ಕಾನೂನು ಭಯ ಇತ್ತು. ನಾವು ದೇವದಾಸಿಯರೆಂದು ಹೇಳಿಕೊಂಡರೇ ನಮಗೆ ಶಿಕ್ಷೆ ಆಗುತ್ತದೆಂದು ೧೯೯೪ರ ಸರ್ವೆ ನಡೆದಾಗ ಅವರು ತಮ್ಮ ಹೆಸರು ನೊಂದಾಯಿಸಿಕೊಂಡಿಲ್ಲ.

೨. ಸರ್ವೆ ಮಾಡುವವರು ಸಮರ್ಪಕವಾಗಿ ಸಮೀಕ್ಷೆ ಮಾಡಿಲ್ಲ. ಅಂಗನವಾಡಿ ಕಾರ್ಯಕರ್ತರು ಸಮೀಕ್ಷೆ ಮಾಡಿದ್ದು, ಊರು ಬಿಟ್ಟು ಹೋದ ದೇವದಾಸಿಯರ ಹೆಸರು ಮತ್ತು ವಯಸ್ಸಾದ ದೇವದಾಸಿಯರ ಹೆಸರನ್ನು ಅವರು ನೊಂದಾಯಿಸಿಕೊಂಡಿರಲಿಲ್ಲ. ಹಾಗೂ ಸಾಕಷ್ಟು ಹಳ್ಳಿಗಳಲ್ಲಿ ಸಮೀಕ್ಷೆ ನಡೆದಿರಲಿಲ್ಲ.

೩. ೨೦೦೭ರ ಹೊತ್ತಿಗೆ ದೇವದಾಸಿ ಪುನರ್ ವಸತಿ ಯೋಜನೆ ತನ್ನ ಕಾರ್ಯಕ್ರಮಗಳ ಮೂಲಕ ಹಳ್ಳಿಹಳ್ಳಿಗೂ ಹೋಗಿ ಜಾಗೃತಿ ಮೂಡಿಸಿರುವುದರಿಂದ ಮತ್ತು ಅವರನ್ನು ಸಮಾಜದ ಮುಖ್ಯ ವಾಹಿನಿಗೆ

ತರುವ ಪ್ರಯತ್ನ ಮಾಡಿ ಯಶಸ್ಸು ಆಗಿರುವುದರಿಂದ ಸರಕಾರದ ಅನೇಕ ಸೌಲಭ್ಯಗಳು ದೊರಕುತ್ತಿದ್ದು ಸರ್ವೆನಲ್ಲಿ ಹೆಸರಿಲ್ಲದವರಿಗೆ ಆ ಸೌಲಭ್ಯಗಳು ತಲುಪುವುದಿಲ್ಲ ಎಂದು ಗೊತ್ತಾದಾಗ ಅವರು ತಮ್ಮ ಹೆಸರು ನೊಂದಾಯಿಸಿದರು. ಈ ಕಾರಣಗಳಿಂದ ಅವರ ಸಂಖ್ಯೆ ಹೆಚ್ಚಾಗಿದೆ ಎಂದು ತಿಳಿಸುತ್ತಾರೆ.

**ಕೋಷ್ಟ ೨**

**ಬಾಗಲಕೋಟೆ ಜಿಲ್ಲೆಯ ದೇವದಾಸಿಯರ ಒಟ್ಟು ಸಂಖ್ಯೆ ೮೬೬೨.**

| | | |
|---|---|---|
| ದೇವದಾಸಿಯರ ಸಂಖ್ಯೆ | ಜೀವಂತ | ೭೨೯೮ |
| | ಮರಣ | ೧೧೩೨ |
| | ವಲಸೆ | ೦೨೩೨ |
| | ಒಟ್ಟು | ೮೬೬೨ |

(೧೯೯೪ರಲ್ಲಿ ಮೊದಲ ಸರ್ವೆ, ೨೦೦೭ ಎರಡನೇ ಸರ್ವೆ)

**ಮಾಹಿತಿ:** ದೇವದಾಸಿ ಪುನರ್ ವಸತಿ ಯೋಜನೆ ಕಛೇರಿ ಬಾಗಲಕೋಟೆ.

ಇಷ್ಟೆಲ್ಲ ಹೇಳಿಕೆಯನ್ನು ಒಂದು ದೃಷ್ಟಿಯಲ್ಲಿ ಒಪ್ಪಿಕೊಂಡರೆ ಮತ್ತೊಂದು ದೃಷ್ಟಿಯಿಂದ ಒಪ್ಪಿಕೊಳ್ಳಲು ಆಗುವುದಿಲ್ಲ. ಆಧುನಿಕ ಜಗತ್ತಿನಲ್ಲಿ ಇಂತಹ ಪದ್ಧತಿಗಳು ಆಧುನೀಕರಣಗೊಳ್ಳುತ್ತಿವೆ. ಕಡು ಬಡತನದಿಂದ ಬದುಕುತ್ತಿರುವ ದಲಿತ ಕುಟುಂಬಗಳು ಈ ಪದ್ಧತಿಯನ್ನು ಇನ್ನೂ ಬಿಟ್ಟಿಲ್ಲ. ಬದಲಾಗಿ ತಮ್ಮ ಮಗಳಿಗೆ ಚಿಕ್ಕವಯಸ್ಸಿನಲ್ಲೆ ಮದುವೆ ಮಾಡಿ ನಂತರ ಯಾವುದೋ ಕಾರಣ ಒಡ್ಡಿ ವಿವಾಹ ವಿಚ್ಛೇದನೆ ಪಡೆದು ಅಂತಹ ಹೆಣ್ಣು ಮಕ್ಕಳನ್ನು ಬಾಂಬೆ ಅಥವಾ ಪುಣೆಗೆ ಕಳುಹಿಸುತ್ತಾರೆ. ಈ ರೀತಿ ಮತ್ತೆ ಅದೇ ವೇಶ್ಯಾ ವೃತ್ತಿಗೆ ಬರುತ್ತಿರುವುದು ಸದ್ಯದ ಪರಿಸ್ಥಿತಿಯಾಗಿದೆ. ಸರಕಾರ ಇವರಿಗೆ ಕಲ್ಪಿಸಿಕೊಡುವ ಯೋಜನೆಗಳು, ಸಹಾಯಗಳು, ಜಾಗತಿಕರಣದ ಸಂದರ್ಭದಲ್ಲಿ ಚಲಾವಣೆಯಲ್ಲಿಲ್ಲದ ನಾಣ್ಯಗಳಂತಾಗಿವೆ. ಬಂಡವಾಳ ನಿಷ್ಟ ಮಾರುಕಟ್ಟೆಗಳು, ಹೊಸ ಆರ್ಥಿಕ ಆವಿಷ್ಕಾರಗಳು ದೇವದಾಸಿಯರ ಬದುಕಿನ ಮೇಲೆ ಪರಿಣಾಮ ಬೀರಿವೆ. ಬಡತನಕ್ಕಿಂತ ಕೆಳರೇಖೆಯಲ್ಲಿರುವ ಕುಟುಂಬಗಳು ಬೇರೆ ದಾರಿಲ್ಲದೆ ಮೂಲ ಸ್ಥಿತಿಯಲ್ಲಿಯೇ ಉಳಿದಿವೆ.''[೨೫] ಅಷ್ಟೇ ಅಲ್ಲ ಐಶಾರಾಮಿ ಜೀವನ ಬಯಸುವಂತಹ ಅನಕ್ಷರಸ್ಥ ಹುಡುಗಿಯರು ಬಾಂಬೆ ಜೀವನ ಸುಂದರವಾಗಿರುತ್ತದೆಂಬ ಕಲ್ಪನೆಯಿಂದ ತಮ್ಮ ಸಂಬಂಧಿಗಳ ಪ್ರೋತ್ಸಾಹದಿಂದ ಸದ್ದಿಲ್ಲದೆ ಅವರು ಬಾಂಬೆ ಅಥವಾ ಪುಣೆಗೆ ಹೋಗಿ ಈ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ದೇವದಾಸಿಯರ ಸಂಖ್ಯೆ ಹೆಚ್ಚಲು ಕಾರಣವಾಗಿದೆ. ಅದೇನೇ ಇರಲಿ ಸಮಾಜದ ಇಂತಹ ಮುಖ್ಯ ಸಮಸ್ಯೆಗಳನ್ನು ಬುಡಸಮೇತ ನಾಶಮಾಡುವ ಕೆಲಸವನ್ನು ದಲಿತ ಸಂಘರ್ಷ ಸಮಿತಿಯಂತಹ ಸಂಘಟನೆಗಳು ಕ್ರಮಕೈಗೊಳ್ಳಬೇಕಾಗಿದೆ.

## ಖಾಸಗಿ ಕ್ಷೇತ್ರದಲ್ಲಿ ಮೀಸಲಾತಿ

ಸಾಮಾಜಿಕ, ಆರ್ಥಿಕ, ಅಸಮಾನತೆಗಳು ತೊಲಗದಿದ್ದರೆ ನಮ್ಮ ಪ್ರಜಾಪ್ರಭುತ್ವವು ದೀರ್ಘಕಾಲ ಉಳಿಯಲಾರದು ಎಂಬುದಾಗಿ ಬಾಬಾಸಾಹೇಬ ಅಂಬೇಡ್ಕರ್ ೧೯೫೦ರ ಜನವರಿ ೨೬ ರಂದು ದೇಶಕ್ಕೆ ಎಚ್ಚರಿಕೆ ನೀಡಿದ್ದರು. ನಮ್ಮ ಸಂವಿಧಾನದಲ್ಲಿ ಸಮಾಜವಾದದ ಕನಸಿದೆ. ಸಾಮಾಜಿಕ ನ್ಯಾಯದ ಕಳಕಳಿ ಇದೆ. ಆದರೆ ಇವನ್ನು ತುಂಬು ಮನಸ್ಸಿನಿಂದ ಜಾರಿಗೊಳಿಸುವ ನಿಷ್ಠುರ ಕೆಲಸವನ್ನು ಆಳುವ ಪಕ್ಷಗಳು ಮಾಡಲು ಹಿಂದೇಟು ಹಾಕುತ್ತಲೇ ಇವೆ. Our Constitution is like a gun that does not fire ಎಂಬ ಮಾತಿದೆ. ನಮ್ಮ ಸರಕಾರಗಳು ಸಂವಿಧಾನದ ಬಲಿಷ್ಠತೆಯನ್ನು ನಾಶಮಾಡಿದ್ದು ಹೀಗೆ ಇದರ ಪರಿಣಾಮವಾಗಿ ದಲಿತರ ಮೇಲಿನ ದೌರ್ಜನ್ಯಗಳು, ರೈತರ ಆತ್ಮಹತ್ಯೆಗಳು, ಬೇಸಾಯಗಾರರ ಬವಣೆಗಳು, ಕಾರ್ಮಿಕರ, ಕೂಲಿಕಾರರ ಸಮಸ್ಯೆಗಳು, ನಿರುದ್ಯೋಗದ ಸಮಸ್ಯೆಗಳು ದೇಶದ ಬಡ ಜನತೆಯನ್ನು ಬದುಕಲಾಗದ ದುಃಸ್ಥಿತಿಗೆ ತಳ್ಳಿವೆ. ಮೇಲ್ವರ್ಗಗಳು ದಿನದಿಂದ ದಿನಕ್ಕೆ ನಗರ ಜೀವನದ ಶ್ರೀಮಂತಿಕೆಯಲ್ಲಿ ತೇಲಾಡುತ್ತಿವೆ. ಬಡವರ ಪಾಲಿಗೆ ಹಳ್ಳಿಗಳು ಬೆಂಗಾಡಿನ ನರಕವಾಗಿವೆ. ನಗರಗಳು ಕೊಳಗೇರಿಯ ನಗರಗಳಾಗಿವೆ. ಜಾಗತೀಕರಣವು ಸಮಾಜವಾದದ ತಮ್ಮ ಕನಸನ್ನು ನುಚ್ಚುನೂರು ಮಾಡುತ್ತಿವೆ. ಖಾಸಗೀಕರಣದಿಂದಾಗಿ ಸರಕಾರವು ಸಾಮಾಜಿಕ ಹೊಣೆಗಾರಿಕೆಯಿಂದ ನುಣುಚಿಕೊಳ್ಳುತ್ತಿದೆ.[೨೬] ಸಾಮಾಜಿಕ ನ್ಯಾಯ ಸ್ಥಾಪಿಸುವ ಮಾರ್ಗಗಳಲ್ಲಿ ಒಂದಾದ ಮೀಸಲಾತಿ ನೀತಿಯನ್ನು ಕತ್ತು ಹಿಚುಕಿ ಸಾಯಿಸುವ ಪ್ರಯತ್ನಗಳು ನಡೆಯುತ್ತಿವೆ.

ಮೇಲ್ಜಾತಿ ಮೇಲ್ವರ್ಗಗಳಲ್ಲಿ ಮಾತ್ರ ಪ್ರತಿಭಾವಂತರಿರುತ್ತಾರೆ ಎಂಬ ಆಧುನಿಕ ಮೂಢನಂಬಿಕೆಯನ್ನು ಬಿತ್ತಲಾಗುತ್ತಿದೆ. ವಿಜ್ಞಾನ, ತಂತ್ರಜ್ಞಾನ, ಮಾಹಿತಿ ತಂತ್ರಜ್ಞಾನ, ಉನ್ನತ ಶಿಕ್ಷಣ ಅಷ್ಟೆ ಏಕೆ ಸಹಕಾರಿ ಕ್ಷೇತ್ರದಲ್ಲಿ ಕೂಡ ಮೀಸಲಾತಿ ಬೇಡ ಎಂದು ಸುದ್ದಿ ಮಾಡಲಾಗಿತ್ತು. ಮೀಸಲಾತಿ ದೇಶದ ಅಭಿವೃದ್ಧಿಗೆ ಮಾರಕ ಎಂಬ ಹೊಸ ಸಿದ್ಧಾಂತವನ್ನು ಹುಟ್ಟುಹಾಕಲಾಗಿದೆ. ಸಾಮಾಜಿಕ ನ್ಯಾಯದ ಆಧಾರವೇ ಅಲುಗಾಡುತ್ತಿದೆ. ಈ ಹಿನ್ನೆಲೆಯಲ್ಲಿ ದಲಿತ ಹಿಂದೂಳಿದ ಹಾಗೂ ಅಲ್ಪಸಂಖ್ಯಾತ ವರ್ಗಗಳು ತಾತ್ವಿಕವಾಗಿ ಖಾಸಗೀಕರಣವನ್ನು ವಿರೋಧಿಸುತ್ತಲೆ ಈ ಬೆಳವಣಿಗೆಯ ತಾತ್ಕಾಲಿಕ ಅನುಕೂಲಗಳನ್ನು ಮೇಲ್ವರ್ಗಗಳೇ ಕಬಳಿಸದಂತೆ ತಡೆದು ಸಾಮಾಜಿಕ ನ್ಯಾಯದ ಆಧಾರದ ಮೇಲೆ ಖಾಸಗಿ ಕ್ಷೇತ್ರದಲ್ಲೂ ಮೀಸಲಾತಿಯನ್ನು ಜಾರಿಗೊಳಿಸುವಂತೆ ಸರಕಾರವನ್ನು ಒತ್ತಾಯಿಸಬೇಕಿದೆ. ಜಾಗತೀಕರಣ, ಖಾಸಗೀಕರಣ ಮತ್ತು ಆರ್ಥಿಕ ಉದಾರೀಕರಣಗಳು ದೇಶದ ಸಾರ್ವಭೌಮತ್ವವನ್ನು ನಾಶಪಡಿಸುವ ಸ್ಥಿತಿ ಒಂದು ಕಡೆ ಇದ್ದರೆ ಮತ್ತೊಂದು ಕಡೆ ಕೋಮುವಾದವು ದೇಶದ ಬಹುಮುಖೀ ಸಂಸ್ಕೃತಿಯನ್ನು ನಾಶಮಾಡತೊಡಗಿದೆ. ಎಲ್ಲ ಪ್ರಗತಿಪರರೂ ಸಾಮಾಜಿಕ ನ್ಯಾಯದ ಹಕ್ಕಿಗಾಗಿ, ಜಾತ್ಯಾತೀತ ಪ್ರಜಾಪ್ರಭುತ್ವದ ರಕ್ಷಣೆಗಾಗಿ ಜಾತ್ಯಾತೀತ ಶಕ್ತಿಗಳ ಸಂಗಮದ ಈ ಜಿಲ್ಲಾ ಮಟ್ಟದ

ಬೃಹತ್ ಧರಣಿ ಕಾರ್ಯಕ್ರಮದ ಮೂಲಕ ಖಾಸಗಿ ಕ್ಷೇತ್ರದಲ್ಲಿ ಪರಿಶಿಷ್ಟ ಜಾತಿ ಜನಾಂಗದವರಿಗೆ ಮೀಸಲಾತಿಯನ್ನು ನೀಡುವುದು ನ್ಯಾಯ ಸಮ್ಮತ ಹಾಗೂ ಅತೀ ಸೂಕ್ತವಾದ ಕ್ರಮವನ್ನು ಕೈಗೊಂಡು ಈ ನಾಡಿನ ದಲಿತ ಜನಾಂಗದವರಿಗೆ ನ್ಯಾಯ ಒದಗಿಸಿಕೊಡಬೇಕೆಂದು ಬಾಗಲಕೋಟೆ ಜಿಲ್ಲೆಯ ಕರ್ನಾಟಕ ದಲಿತ ಸಂಘರ್ಷ ಸಮಿತಿ ರಾಜ್ಯ ಹಾಗೂ ಕೇಂದ್ರ ಸರಕಾರಕ್ಕೆ ಮನವಿ ಮಾಡಿಕೊಂಡಿತು.

**ದಲಿತರಿಗೆ ಇಂಗ್ಲಿಷ್ ಶಿಕ್ಷಣದ ಅವಶ್ಯಕತೆ**

ಭಾರತದಲ್ಲಿ ಹಲವಾರು ಜಾತಿ, ಧರ್ಮ, ಭಾಷೆಗಳಿವೆ. ಹಿಂದೂ ಧರ್ಮ ಸಂಪ್ರದಾಯವು ದಲಿತರನ್ನು ಕೇವಲ ಜಾತಿಧರ್ಮಗಳಿಂದ ದೂರ ಇಡುವುದಲ್ಲದೆ ಭಾಷೆಯಿಂದಲೂ ದೂರ ಇಟ್ಟಿತು. ವೈದಿಕ ಕಾಲದ ಚತುರ್ವರ್ಣ ವ್ಯವಸ್ಥೆಯಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಗಗಳಲ್ಲಿ ನಾಲ್ಕನೇ ವರ್ಣವು ಉಪನಯನ ಸಂಸ್ಕಾರದಿಂದ ವಂಚಿತವಾಯಿತು. ಆಗಿನಿಂದಲೂ ಶೂದ್ರರ ಮೇಲೆ ಅನರ್ಹತೆಗಳು ಹೇರಲ್ಪಟ್ಟವು. ಐದನೇ ವರ್ಗ ಎನ್ನಲಾದ 'ಪಂಚಮ' ಜನಾಂಗದವರು ಸಂಸ್ಕೃತ ಭಾಷೆಯ ಲೆಕ್ಕದಲ್ಲಿ ಮನುಷ್ಯರೇ ಆಗಿರಲಿಲ್ಲ. ಪಶುಗಳಿಗಿಂತ ಕೀಳಾಗಿ ಕಾಣುತ್ತಿದ್ದ ಈ ಸಮುದಾಯವನ್ನು ಲೋಕದ ಸನಿಹ ತರದೆ ಗುಲಾಮರನ್ನಾಗಿಸಿಕೊಂಡರು. ಬ್ರಿಟೀಷರ ಕಾಲದಲ್ಲಿ ಶಿಕ್ಷಣವು ಸಾರ್ವತ್ರೀಕರಣಗೊಂಡರು ಸಹ ಇದರ ಲಾಭವನ್ನು ಪಡೆದವರು ಮತ್ತದೇ ಬಂಡವಾಳಶಾಹಿ ಶ್ರೀಮಂತರೇ ಆಗಿದ್ದಾರೆ. ಆಗಲೂ ಸಹ ಶೋಷಿತ ವರ್ಗದವರು ಶಿಕ್ಷಣದಿಂದ ವಂಚಿತರಾದರು. ಇಂಥ ಸ್ಥಿತ್ಯಂತರದಲ್ಲಿ ಭಾರತೀಯ ಸಮಾಜವನ್ನು ಅನುಲಕ್ಷಿಸಿದಾಗ ಬಡವರು, ಅಸ್ಪೃಶ್ಯರು ತಮ್ಮ ಮೇಲಾಗುವ ದಬ್ಬಾಳಿಕೆಯನ್ನು ಪ್ರಶ್ನಿಸದೆ ಅವುಗಳನ್ನು ಸಹಿಸಿಕೊಂಡು ಬಂದಿರುವುದಕ್ಕೆ ಕಾರಣ ಅವರಲ್ಲಿರುವ ಅಜ್ಞಾನ, ಅನಕ್ಷರತೆ ಎಂದು ಸ್ಪಷ್ಟವಾಗಿ ಗುರುತಿಸಬಹುದು.

ಇಂದಿನ ದಿನಮಾನಗಳಲ್ಲಿ ಶಿಕ್ಷಣವು ಸಾರ್ವತ್ರಿಕರಣಗೊಂಡರು ಸಹ ಅದು ಪ್ರಾದೇಶಿಕ ಭಾಷೆಗೆ ಅನುಗುಣವಾಗಿದೆ. ಆಧುನೀಕರಣ, ಜಾಗತೀಕರಣಗೊಳ್ಳುತ್ತಿರುವ ಜಗತ್ತನ್ನು ಅರ್ಥಮಾಡಿಕೊಳ್ಳಲು ಇಂಗ್ಲಿಷ್ ಶಿಕ್ಷಣ ಅನಿವಾರ್ಯವಾಗಿದೆ. ಆಧುನಿಕೋತ್ತರ ಜಗತ್ತಿನ ಕಠಿಣವಾದ ಪೈಪೋಟಿಯನ್ನು ಎದುರಿಸಿ ಬದುಕಬೇಕಾದರೆ ಇಂಗ್ಲಿಷ್ ಶಿಕ್ಷಣದ ಅವಶ್ಯಕತೆ ಇದೆ. ಇಂತಹ ಶಿಕ್ಷಣ ದಲಿತ ಸಮುದಾಯಗಳಿಗೆ ಪ್ರಾಥಮಿಕ ಹಂತದಿಂದಲೇ ಸಿಗಬೇಕು. ಸರಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದ ಇಂಗ್ಲಿಷ್ ಬೋಧನೆಯಾಗಬೇಕಾಗಿದೆ. ದಲಿತ ದೀನದುರ್ಬಲರ ಮಕ್ಕಳಿಗೆ, ರೈತರ ಮಕ್ಕಳಿಗೆ, ನಗರ ಕೊಳಗೇರಿಗಳಲ್ಲಿನ ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ಬೇಕು. ಇಂತಹವರು ಬಡವರಾಗಿದ್ದು ಖಾಸಗೀ ಶಾಲೆಗಳಲ್ಲಿ ತಮ್ಮ ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸುವ ಶಕ್ತಿ ಇಲ್ಲದಿರುವುದರಿಂದ ಸರಕಾರಿ ಶಾಲೆಗಳೇ ಆಕರವಾಗಿ ಗ್ರಾಮೀಣ ಪ್ರದೇಶಗಳಲ್ಲಿರುವ ಮಕ್ಕಳು ವೈಜ್ಞಾನಿಕ ಪ್ರಪಂಚದ ಸ್ಪರ್ಧಾತ್ಮಕ ಜೀವನ ಸಾಗಿಸಬೇಕೆಂದರೆ ಅವರಿಗೆ ಇಂಗ್ಲಿಷ್ ಶಿಕ್ಷಣ ಸರಕಾರಿ ಶಾಲೆಗಳಿಂದ ಸಿಗಬೇಕಾಗಿರುವುದು ಅನಿವಾರ್ಯವಾಗಿದೆ. ಸ್ವತಃ ಗಾಂಧೀಜಿ, ಅಂಬೇಡ್ಕರ್, ನೆಲ್ಸನ್ ಮಂಡೇಲರೇ ಇಂಗ್ಲಿಷ್

ಭಾಷೆಯ ಉಪಕರಣದಿಂದಲೇ ಪಶ್ಚಿಮದ ಪ್ರಭುತ್ವವನ್ನು ಎದುರಿಸಿದರು[೨೬] ಅಂಬೇಡ್ಕರ ಅವರು ಇಂಗ್ಲಿಷ್ ವ್ಯಾಸಂಗ ಮಾಡಿದುದರಿಂದಲೇ ವಿದೇಶಗಳನ್ನು ಸುತ್ತಿ ಅವರ ನೀತಿಗಳನ್ನು ಅರಿತುಕೊಳ್ಳುವಂತಾಯಿತು. ಹಿಂದೂ ಸಮಾಜದ ನಿರ್ಬಂಧನೆಗಳನ್ನು ಎದುರಿಸಲು ಇಂಗ್ಲಿಷ್ ಭಾಷೆಯನ್ನು ಅಸ್ತ್ರವನ್ನಾಗಿ ಬಳಸಿದರು ಎಂದು ಹೇಳಬಹುದು.

ಭಾರತ ಹಳ್ಳಿಗಳ ದೇಶ ಗ್ರಾಮೀಣ ಪ್ರತಿಭೆಗಳು ಜಗತ್ತಿಗೆ ತಿಳಿಯಬೇಕಾದ ಉನ್ನತ ಶಿಕ್ಷಣದಿಂದ ಮಾತ್ರ ಸಾಧ್ಯ. ಶಿಕ್ಷಣವು ಎಲ್ಲ ಸಂಪನ್ಮೂಲಗಳಲ್ಲಿ ಅತ್ಯಂತ ಮಹತ್ವವಾದದು. ಶಿಕ್ಷಣ ಯಾವುದೇ ಸಮಸ್ಯೆಯನ್ನು ಎದುರಿಸಬಲ್ಲ ಸಮಗ್ರ ಅಭಿವೃದ್ಧಿಯನ್ನು ತರಬಲ್ಲ ಏಕೈಕ ಸಾಧನವಾಗಿದೆ. ಜಾಗತೀಕ ವಿದ್ಯಮಾನದಲ್ಲಿ ಇಂಗ್ಲೀಷ ಶಿಕ್ಷಣ ಬಹಳ ಪ್ರಾಮುಖ್ಯತೆ ಪಡೆದುಕೊಂಡಿದೆ. ಸಮಾಜವಾದಿಗಳು ಇಂಗ್ಲೀಷ ಶಿಕ್ಷಣವನ್ನು ಪ್ರತಿಪಾದಿಸುತ್ತಲೇ ಬಂದಿದ್ದಾರೆ. ಸಮಾಜವಾದಿ ರಾಮಮನೋಹರ ಲೋಹಿಯಾ ಅವರು ಇಂಗ್ಲೀಷ ವಿರೋಧಿಸಿದರೂ ಸಹ ''ಭಾರತದಲ್ಲಿ ನೀವು ಆಳುವ ವರ್ಗಕ್ಕೆ ಬರಬೇಕಾದರೆ ಮೂರು ಅಂಶಗಳು ಇರಬೇಕು. ಇಂಗ್ಲೀಷ, ಉನ್ನತ ಜಾತಿ, ಶ್ರೀಮಂತಿಕೆ ಇವು ಮೂರರಲ್ಲಿ ಯಾವುದೇ ಎರಡು ಇದ್ದರೆ ಮತ್ತೊಂದು ತಾನಾಗಿಯೆ ಸಿಗುತ್ತೆ'' ಎಂದು ಹೇಳಿದ್ದಾರೆ. ಇದು ಇಂಗ್ಲೀಷ ಭಾಷೆಯ ಮಹತ್ವವನ್ನು ತಿಳಿಸುತ್ತದೆ.

ಈ ನಿಟ್ಟಿನಲ್ಲಿ ಬಾಗಲಕೋಟೆ ದಲಿತ ಸಂಘರ್ಷ ಸಮಿತಿ ಭೀಮವಾದ ಸುಮಾರು ನಾಲ್ಕು ವರ್ಷಗಳಿಂದಲೂ ವಿವಿಧ ಹಂತದ ಹೋರಾಟಗಳನ್ನು ರೂಪಿಸುತ್ತಾ ಒಂದನೇ ತರಗತಿಯಿಂದ ಇಂಗ್ಲೀಷನ್ನು ಒಂದು ಭಾಷೆಯನ್ನಾಗಿ ಜಾರಿಗೆ ತರಬೇಕೆಂದು ರಾಜ್ಯ ಸರ್ಕಾರವನ್ನು ಒತ್ತಾಯಿಸುತ್ತಾ ಬಂದಿದೆ. ಇಂಥ ನಿರ್ಣಯಗಳನ್ನು ಜಾರಿಗೊಳಿಸಲು ಬಲಿಷ್ಠವಾದ ರಾಜಕೀಯ ಇಚ್ಛಾಶಕ್ತಿ ಬೇಕು. ಅಂತಹದೊಂದು ಪ್ರಯತ್ನ ಮಾಜಿ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಮಾಡಿದ್ದಾರೆ. ತಮ್ಮ ಅವಧಿಯಲ್ಲಿ ಒಂದನೇ ತರಗತಿಯಿಂದ ಒಂದು ಭಾಷೆಯನ್ನಾಗಿ ಇಂಗ್ಲೀಷ ಕಲಿಸುವುದಕ್ಕೆ ತೀರ್ಮಾನ ತೆಗೆದುಕೊಂಡಿರುವುದು ಈ ರಾಜ್ಯದ ಶೋಷಿತ ಸಮುದಾಯದ ಸಾಮಾಜಿಕ ಪರಿವರ್ತನೆಗೆ ಒಂದು ಅಡಿಗಲ್ಲು. ಇಂತಹ ನಿರ್ಧಾರವನ್ನು ದಲಿತ ಸಂಘರ್ಷ ಸಮಿತಿ ಸ್ವಾಗತಿಸುತ್ತದೆ. ಗ್ರಾಮೀಣ ಪ್ರದೇಶದ ಶೋಷಿತ ವಿದ್ಯಾರ್ಥಿಗಳ ಮತ್ತು ಸರಕಾರಿ ಕನ್ನಡ ಶಾಲೆಗಳ ಮಕ್ಕಳ ಬದುಕು ಮತ್ತು ಭವಿಷ್ಯವನ್ನು ಗಮನಿಸಬೇಕು. ಇದರೊಂದಿಗೆ ನಗರ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಬುದ್ಧಿಮತ್ತೆಯನ್ನು ಗಮನಿಸಬೇಕು. ಖಾಸಗೀಕರಣದ ಈ ಹೊತ್ತಿನಲ್ಲಿ ಶೋಷಿತ ಸಮುದಾಯಗಳ ಪರಿವರ್ತನೆಗಾಗಿ ಇರುವ ಸೌಲಭ್ಯಗಳಲ್ಲಿ ಇಂಗ್ಲೀಷ ಭಾಷೆಯು ಒಂದಾಗಿದ್ದು[೨೭] ಕನ್ನಡದ ಹೆಸರಿನಲ್ಲಿ ಇಂಗ್ಲೀಷನ್ನು ವಿರೋಧಿಸಬಾರದು ಎಂದು ೨೮.೧೦.೨೦೦೬ರಂದು ಪತ್ರಿಕಾ ಹೇಳಿಕೆ ನೀಡಿತು.

**ರಾಜ್ಯದ ಸಮಸ್ಯೆಗಳಿಗೆ ಜಿಲ್ಲಾ ದಲಿತ ಸಂಘರ್ಷ ಸಮಿತಿ ಸ್ಪಂದನೆ**

೧. ೨೫.೦೮.೨೦೦೬ ಬಿಜಾಪುರ ಜಿಲ್ಲೆಯ ಬಸವನ ಬಾಗೆವಾಡಿ ತಾಲ್ಲೂಕಿನ ಮದರಿಕೊಪ್ಪ ಗ್ರಾಮದ ಮಾದಿಗ ಜನಾಂಗಕ್ಕೆ ಸೇರಿದ ಅಪ್ರಾಪ್ತ ಬಾಲಕಿಯ ಮೇಲೆ ಅತ್ಯಾಚಾರ ಎಸಗಿದ ಅದೇ ಗ್ರಾಮದ ದಿಗಂಬರಪ್ಪ, ಲಕ್ಷ್ಮಣ, ಕೊಳಮಲೆಯ ಹೇಯ ಕೃತ್ಯವನ್ನು ಬಾಗಲಕೋಟೆ ಜಿಲ್ಲಾ ದಲಿತ ಸಂಘರ್ಷ ಸಮಿತಿ ತೀವ್ರವಾಗಿ ಖಂಡಿಸಿದೆ. ರಾಜ್ಯದಲ್ಲಿ ದಲಿತರ ಮೇಲೆ ಅತ್ಯಾಚಾರ ದೌರ್ಜನ್ಯ ಕೊಲೆ ಪ್ರಕರಣಗಳು ಹೆಚ್ಚಾಗಿದ್ದು ಅಪರಾಧಿಗಳು ಕಾನೂನಿಗೆ ಹೆದರದೆ ಪದೇ ಪದೇ ಅಪರಾಧಗಳನ್ನು ಎಸಗುತ್ತಿದ್ದಾರೆ. ನೊಂದ ದಲಿತರ ಆಕ್ರೋಶದ ಬೆಂಕಿ ಹೊತ್ತಿ ಉರಿಯುವ ಮೊದಲೇ ಸರಕಾರ ಎಚ್ಚೆತ್ತು ದಲಿತರ ಮೇಲೆ ನಡೆಯುತ್ತಿರುವ, ದೌರ್ಜನ್ಯ ಪ್ರಕರಣಗಳನ್ನು ತಡೆಗಟ್ಟಬೇಕೆಂದು ರಾಜ್ಯ ಸಂಘಟನಾ ಸಂಚಾಲಕರಾದ ಶ್ರೀಶೈಲ ಚಲವಾದಿ ಸರಕಾರವನ್ನು ಆಗ್ರಹಿಸಿದರು.[೨೯]

೨. ೨೨.೮.೨೦೦೬ ಶತಮಾನಗಳಿಂದ ಬ್ರಾಹ್ಮಣಶಾಹಿ ವ್ಯವಸ್ಥೆ ದಲಿತರನ್ನು ಜಾತಿಯ ಅಸಮಾನತೆಯಿಂದ ತುಳಿಯುತ್ತಾ ಪ್ರಾಣಿಪಕ್ಷಿಗಳಿಗಿಂತ ಕೀಳಾಗಿ ಕಾಣುತ್ತಿದೆ. ದೇಶಕ್ಕೆ ಸ್ವತಂತ್ರ್ಯ ಬಂದು ಆರು ದಶಕಗಳು ಕಳೆದರೂ ದಲಿತರ ಬದುಕು ಬದಲಾಗಲಿಲ್ಲ. ಹಸಿವು ಬಡತನ ನಿರುದ್ಯೋಗದಿಂದ ಕಂಗಾಲಾಗಿದ್ದಾರೆ. ಸಮ್ಮಿಶ್ರ ಸರಕಾರ ಅಸ್ತಿತ್ವಕ್ಕೆ ಬಂದ ನಂತರ ಜನವಿರೋಧಿ ಮತ್ತು ದಲಿತ ವಿರೊಧಿ ಎಂದು ತೋರಿಸಿದೆ. ರಾಜ್ಯದ ಬಲಾಢ್ಯ ಕೋಮುಗಳು ತನ್ನ ಪಾಳೆಗಾರಿಕೆ ಮತ್ತು ಯಜಮಾನ ಸಂಸ್ಕೃತಿಯ ದಬ್ಬಾಳಿಕೆ ನಡೆಸಿವೆ. ಇದರ ಪರಿಣಾಮವಾಗಿ ಗದಗ ಜಿಲ್ಲಾ ರೋಣ ತಾಲ್ಲೂಕಿನ ಹಾಲ್ಕೇರಿ ಗ್ರಾಮದಲ್ಲಿ ಸಾರಾಯಿ ಅಂಗಡಿ ಹತ್ತಿರ ನಡೆದ ಕ್ಷುಲ್ಲಕ ಕಾರಣಕ್ಕಾಗಿ ನಡೆದ ಗಲಾಟೆಯಿಂದ ಸವರ್ಣಿಯರು ಊರಿನ ದಲಿತ ಓಣಿಗಳಿಗೆ ನುಗ್ಗಿ ಹೆಣ್ಣುಮಕ್ಕಳು ಸೇರಿದಂತೆ ಎಲ್ಲಾ ದಲಿತರ ಮೇಲೆ ದೌರ್ಜನ್ಯ ಮಾಡಿದ್ದಾರೆ. ಅದೇ ರೀತಿ ರಾಯಚೂರ ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿ ಅಂಗನವಾಡಿ ಕಾರ್ಯಕರ್ತೆ ಮಲ್ಲಮ್ಮ ಆತ್ಮಹತ್ಯೆ ಪ್ರಕರಣ, ಬಿಜಾಪುರ ಜಿಲ್ಲೆಯ ಕಡಕೋಳ, ಲೊಟಗೇರಿ, ಗಂಗೂರ ಗ್ರಾಮಗಳಲ್ಲಿ ಸಾಮಾಜಿಕ ಬಹಿಷ್ಕಾರ, ನಾಗದಿನ್ನಿ ಗ್ರಾಮದ ಭೂಮಿ ಸಮಸ್ಯೆ, ಬಾಗಲಕೋಟೆ ಜಿಲ್ಲೆಯ ಬಂದನೂರು ಗ್ರಾಮದ ಹಣಮಂತ ಮಾದರ ಕೊಲೆ ಪ್ರಕರಣ, ಮುಧೋಳ ತಾಲ್ಲೂಕಿನ ಅಪ್ರಾಪ್ತ ದಲಿತ ಬಾಲಕಿಯ ಮೇಲಿನ ಅತ್ಯಾಚಾರ.[೩೦] ಹೀಗೆ ರಾಜ್ಯದ ಉದ್ದಗಲಕ್ಕೂ ಸಾವಿರಾರು ಈ ರೀತಿಯ ದೌರ್ಜನ್ಯ, ಕೊಲೆ ಪ್ರಕರಣಗಳು ನಿರಂತರವಾಗಿ ನಡೆದರೂ ಸರಕಾರ ಯಾವುದೇ ಕ್ರಮ ಜರುಗಿಸದೆ ದಲಿತರಿಗೆ ರಕ್ಷಣೆ ನೀಡದೆ ಇರುವುದನ್ನು ನಾಗರಿಕ ಸಮಾಜ ತೀವ್ರವಾಗಿ ಖಂಡಿಸಬೇಕಾಗಿದೆ.

೩. ತುಮಕೂರು ತಾಲ್ಲೂಕು ಹೊಸಹಳ್ಳಿಯಲ್ಲಿ ದಲಿತ ನ್ಯಾಯವಾದಿ ಶ್ರೀನಿವಾಸ ಅವರ ಮೇಲೆ ನಡೆದ ಕೊಲೆ ಪ್ರಯತ್ನದಲ್ಲಿ ತೊಡಗಿದ ಅಪರಾಧಿಗಳನ್ನು ಪತ್ತೆ ಮಾಡಿ ಕಠಿಣ ಶಿಕ್ಷೆಗೆ ಗುರಿಪಡಿಸಬೇಕು. ಮೈಸೂರು ಜಿಲ್ಲೆ ಗುಂಡ್ಲುಪೇಟೆಯ ಪತ್ರಕರ್ತ ಸತ್ಯನಾರಾಯಣ ಅವರ ಘೋರ ಕೊಲೆಯನ್ನು ಹಾಗೂ ಬೀದರ ಜಿಲ್ಲೆಯ

ಔರಾದ ತಾಲ್ಲೂಕು ಚೋರಾಳ ಗ್ರಾಮದಲ್ಲಿ ದಲಿತ ಯುವಕ ಪರಶುರಾಮನನ್ನು ಹಾಡು ಹಗಲೇ ಸವರ್ಣೀಯ ಜಮೀನ್ದಾರರು ಗುಂಡು ಹಾರಿಸಿ ಕೊಲೆಗೈದುದನ್ನು ಸಿ.ಬಿ.ಐ ಮುಖಾಂತರ ತನಿಖೆ ನಡೆಸಬೇಕೆಂದು ಜಿಲ್ಲಾ ದಲಿತ ಸಂಘರ್ಷ ಸಮಿತಿ ಸರಕಾರವನ್ನು ಒತ್ತಾಯಿಸಿ ಪ್ರತಿಭಟನೆ ಮಾಡಿತು.[೬೧]

೪. ಚಿತ್ತಾಪುರ ತಾಲ್ಲೂಕಿನ ಚಾಮನೂರ ಗ್ರಾಮದ ದಲಿತರಿಗೆ ಸವರ್ಣೀಯರು ಸಾಮಾಜಿಕ ಬಹಿಷ್ಕಾರ ಹಾಕಿದ್ದು, ಕೋಲಾರ ಜಿಲ್ಲೆಯ ಕಂಬಾಲಪಲ್ಲಿಯಲ್ಲಿ ಏಳು ಮುಗ್ಧ ಜನರನ್ನು ಜೀವಂತವಾಗಿ ಸುಟ್ಟು ಹಾಕಿದ ಕ್ರೂರ ಘಟನೆ, ಬೀದರ ಜಿಲ್ಲೆಯ ಖೆವೆರಜೋಳ ಗ್ರಾಮದ ದಲಿತ ಯುವಕ ದೇವೇಂದ್ರ ಹಲಗಿ ಬೆತ್ತಲೆ ಮೆರವಣಿಗೆ,[೬೨] ಬಳ್ಳಾರಿ ಜಿಲ್ಲೆಯ ವಣೇನೂರು ಗ್ರಾಮದ ದಲಿತ ಮಹಿಳೆ ಮೇಲೆ ನಡೆದ ದೌರ್ಜನ್ಯ, ಚಿಕ್ಕೋಡಿ ತಾಲ್ಲೂಕಿನ ಕೊಥಳ ಗ್ರಾಮದ ಸವರ್ಣೀಯರು ದಲಿತರ ಮೇಲೆ ನಡೆಸಿರುವ ಹಲ್ಲೆ, ಗೋಕಾಕ ತಾಲ್ಲೂಕಿನ ವಡ್ಡರ ಹಟ್ಟಿ ಗ್ರಾಮದಲ್ಲಿ ದಲಿತ ಯುವತಿಯೊಬ್ಬಳ ಮೇಲೆ ಸವರ್ಣೀಯರ ಸಾಮಾಜಿಕ ಅತ್ಯಾಚಾರ[೬೩] ಇಂತಹ ಘಟನೆಗಳು ರಾಜ್ಯದ ತುಂಬಾ ಲೆಕ್ಕವಿಲ್ಲದಷ್ಟು ದಲಿತರ ಮೇಲೆ ದೌರ್ಜನ್ಯಗಳು ನಡೆಯುತ್ತಲೇ ಇದ್ದರು ಸರಕಾರ ಯಾವ ಕ್ರಮಗಳನ್ನು ಕೈಗೊಳ್ಳದೇ ಮೂಕ ಪ್ರೇಕ್ಷಕನಂತೆ ನೋಡುತ್ತ ಸುಮ್ಮನಿರುವುದು ಗಮನಿಸಿದರೆ ಇದು ಜಾತ್ಯಾತೀತ, ಪ್ರಜಾಪ್ರಭುತ್ವ ದೇಶವೇ ಎಂಬ ಅನುಮಾನ ಬರಲು ಆಸ್ಪದಮಾಡಿ ಕೊಡುತ್ತದೆ.

೫. ಅಂಬೇಡ್ಕರ್ ಪ್ರತಿಮೆಗೆ ಅವಮಾನ ಖಂಡನೆ ರಾಷ್ಟ್ರ ನಾಯಕರಾದ ಅಂಬೇಡ್ಕರ ಈ ದೇಶ ಕಂಡ ಮಹಾ ಚಿಂತನಶೀಲ, ದಲಿತಪರ ಹೋರಾಟಗಾರ. ಭಾರತದ ಸಂವಿಧಾನ ರೂಪಿಸಿದ ಶಿಲ್ಪಿ ತಮ್ಮ ವಿಚಾರಗಳಿಂದಲೇ ಶೋಷಿತರನ್ನು ಜಾಗೃತಗೊಳಿಸಿ ಸಂವಿಧಾನದ ಮೂಲಕ ಸಮಾನತೆ ತರಲು ಬಯಸಿದ ಅಗ್ರಗಣ್ಯ ನಾಯಕರಲ್ಲಿ ಒಬ್ಬರು. ಬುದ್ಧ, ಬಸವ, ಅವರ ಪಂಕ್ತಿಯಲ್ಲಿ ಬರುವ ಅಂಬೇಡ್ಕರ್ ಅಸ್ಪೃಶ್ಯ ಜನಾಂಗದ ದನಿಯಾಗಿದ್ದಾರೆ. ಇಂಥ ನಾಯಕರನ್ನು ಗೌರವಿಸುವುದು ಭಾರತದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಿದೆ. ಇವರು ಸಾಧಿಸಿದ ಕಾರ್ಯಗಳು ಯಾರು ಮರೆಯದಂತವು. ತತ್ವ ಸಿದ್ಧಾಂತಗಳನ್ನು ಪ್ರತಿಯೊಬ್ಬರು ಅಳವಡಿಸಿಕೊಂಡು ಉತ್ತಮ ಪ್ರಜೆಗಳಾಗಲಿ ಎಂದು ಪ್ರತಿದಿನ ಅವರ ಪ್ರತಿಮೆ ನೋಡಿ ಅವರು ಸಾಧಿಸಿದ ಆದರ್ಶಗಳನ್ನು ನೆನಪಿಸಿಕೊಂಡು ಬದುಕು ಸಾಗಿಸುವಂತಾಗಲಿ ಎಂದು ಸಂಘ ಸಂಸ್ಥೆ, ಸರಕಾರ ಮಹಾನ್ ವ್ಯಕ್ತಿಗಳ ಪ್ರತಿಮೆಯನ್ನು ನಗರಗಳಲ್ಲಿ ಸ್ಥಾಪಿಸಿದ್ದಾರೆ. ಆದರೆ ಜಾತಿವಾದಿ ಸ್ವಾರ್ಥ ಹಿತಸಾಧಕ, ದುಷ್ಕರ್ಮಿಗಳ ಒಳಸಂಚಿನಿಂದ ಅಂಬೇಡ್ಕರ್ ಪ್ರತಿಮೆಗಳಿಗೆ ಅವಮಾನ ಆಗುತ್ತಿವೆ. ಇದರಲ್ಲಿ ರಾಜಕೀಯ ಕುತಂತ್ರವು ಅಡಿಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಕರ್ನಾಟಕದ ವಿವಿಧ ಕಡೆ ಅಂಬೇಡ್ಕರ್ ಪ್ರತಿಮೆಗಳಿಗೆ ಅವಮಾನವಾಗುತ್ತಿರುವುದು ದಲಿತರ ಆತ್ಮಾಭಿಮಾನ ಕೆರಳಿಸುವ ವೈರುದ್ಯದ ಸಂಗತಿಯಾಗಿದೆ. ಉದಾ: ಕೊಪ್ಪಳ ನಗರ ಸಾಲಾರ್ ಜಂಗ ರಸ್ತೆಯಲ್ಲಿರುವ ಬಾಬಾಸಾಹೇಬ ಅಂಬೇಡ್ಕರ ಪ್ರತಿಮೆ ವಿರೂಪಗೊಳಿಸಿರುವ ಕೃತ್ಯ, ಹೂವಿನ ಹಡಗಲಿಯಲ್ಲಿನ ಡಾ. ಅಂಬೆಡ್ಕರ್ ಪ್ರತಿಮೆಗೆ ಅವಮಾನ, ನಿಪ್ಪಾಣಿ

ಘಟನೆ ವಿರುದ್ಧ ಜಿಲ್ಲಾ ದಲಿತ ಸಂಘರ್ಷ ಸಮಿತಿಗಳು ಅವಮಾನಗೊಳಿಸಿದ ದುಷ್ಕರ್ಮಿಗಳನ್ನು ತಕ್ಷಣ ಬಂಧಿಸಿ ಉಗ್ರಕ್ರಮ ಜರುಗಿಸಬೇಕು" ಎಂದು ಒತ್ತಾಯಿಸಿ ಜಿಲ್ಲಾದ್ಯಂತ ಪ್ರತಿಭಟನಾ ಮೆರವಣಿಗೆ ನಡೆಸಿತು.

**೩.೪. ರಾಜಕೀಯ ಸ್ಥಾನಕ್ಕಾಗಿ ಹೋರಾಟ**

ಅಂಬೇಡ್ಕರ್ ಅವರು ತಮ್ಮ ಜೀವಿತಾವಧಿಯಲ್ಲಿ ಮಾಡಿದ ಪ್ರತಿ ಹೋರಾಟವು, ಚಳವಳಿಗಳು ಇಟ್ಟ ಒಂದೊಂದು ಹೆಜ್ಜೆ ಭಾರತದ ಅಸ್ಪೃಶ್ಯರು ಹಾಗೂ ಶೋಷಿತರ ಹಿತಚಿಂತನೆಯ ರಾಜಕೀಯ ಹೆಜ್ಜೆಗಳಾಗಿವೆ. ಏಕೆಂದರೆ ದಲಿತರು ಆಳುವ ವರ್ಗವಾಗಬೇಕು. ರಾಜಕೀಯ ಅಧಿಕಾರವನ್ನು ಪಡೆಯಬೇಕು. ಎಂಬುದು ಅವರ ಮಹದಾಸೆಯಾಗಿತ್ತು. ಯಾವಾಗ ದಲಿತರು ರಾಜಕೀಯ ಅಧಿಕಾರವನ್ನು ಪಡೆದುಕೊಳ್ಳುತ್ತೀರೋ ಆವತ್ತು ನೀವು ಪರಿವರ್ತನೆಯನ್ನು ಸುಲಭವಾಗಿ ಮಾಡಬಹುದು. ಎಂಬ ಅಭಿಪ್ರಾಯ ಹೊಂದಿದ್ದರು. ದಲಿತ ಪ್ರಧಾನ, ಸ್ವತಂತ್ರ ರಾಜಕಾರಣ ಮಾಡಿದ ಅಂಬೇಡ್ಕರ ತಮ್ಮ ಜೀವಿತದ ಪರಮ ಗುರಿಯಾಗಿದ್ದ ದಲಿತ ಸ್ವರಾಜ್ಯ ಮಾದರಿಯ ಪ್ರತ್ಯೇಕ ಚುನಾವಣೆ ವ್ಯವಸ್ಥೆಯ ಬೇಡಿಕೆ ಇಟ್ಟರು. ಬ್ರಿಟೀಷರ ಕಾಲದಲ್ಲಿ ತಮ್ಮ ನಿರಂತರ ಹೋರಾಟದ, ಅಪಾರವಾದ ಪರಿಶ್ರಮದಿಂದ ಸ್ವತಂತ್ರ ಭಾರತದ ಪ್ರಜಾಪ್ರಭುತ್ವದೊಳಗೆ ದಲಿತರು ತಮ್ಮನ್ನು ತಾವೇ ಆಳಿಕೊಳ್ಳುವ, ತಮ್ಮನ್ನು ತಾವೇ ಆಯ್ಕೆ ಮಾಡಿಕೊಳ್ಳುವ, ಪ್ರತಿನಿಧಿಸುವ ವ್ಯವಸ್ಥೆಗಾಗಿ ಪ್ರಬಲವಾಗಿ ಹೋರಾಟ ಮಾಡಿದರು. ಅಂಬೇಡ್ಕರರ ಈ ನಿಲುವಿನ ವಿರುದ್ಧ ಗಾಂಧೀಜಿ ಹೂಡಿದ ತಾತ್ವಿಕ ಹೋರಾಟದಿಂದಾಗಿ ಅಂಬೇಡ್ಕರ್ ಹೋರಾಟದ ಫಲ ಹಾಗೂ ಭವ್ಯ ಭವಿಷ್ಯದ ದಲಿತ ವಿಮುಕ್ತಿ ಕನಸು ನುಚ್ಚು ನೂರಾಯಿತು, ದಲಿತ ವಿಮೋಚನೆ ಎಂಬುದು ಸರ್ವನಾಶವಾಯಿತು.

ಹಿಂದೂಗಳು ದಲಿತರ ಮೇಲೆ ದಬ್ಬಾಳಿಕೆ, ದೌರ್ಜನ್ಯ, ಶೋಷಣೆ ಮಾಡಲು ಅವರಲ್ಲಿರುವ ಅಧಿಕಾರವೇ ಮೂಲಕಾರಣ. ಇವುಗಳನ್ನು ತಡೆಯಬೇಕಾದರೆ ದಲಿತರು, ಅಸ್ಪೃಶ್ಯರು ಅಧಿಕಾರ ಪಡೆಯಬೇಕು ಎಂದರ್ಥ ಅದು ಕಾರ್ಯಾಂಗ ಅಧಿಕಾರ ಇರಬಹುದು, ನ್ಯಾಯಾಂಗ ಅಧಿಕಾರ ಇರಬಹುದು. ಅಥವಾ ಎಲ್ಲವನ್ನು ನಿಯಂತ್ರಿಸಬಲ್ಲ ಹಾಗೂ ಗಳಿಸಿಕೊಳ್ಳಬಲ್ಲ ''ರಾಜಕೀಯ ಶಾಸನಾಧಿಕಾರ'' ಆಗಿರಬಹುದು ಅದೇ ಮೂಲ ಮತ್ತು ಮುಖ್ಯವಾದ ಅಧಿಕಾರ ಶಕ್ತಿ ಎಂಬುದೇ ಅಂಬೇಡ್ಕರ ಅವರ ವಾದವಾಗಿದೆ.

ದಲಿತರು ಆಳುವ ವರ್ಗವಾಗಬೇಕು. ರಾಜಕೀಯ ಅಧಿಕಾರ ಪಡೆದುಕೊಳ್ಳದೆ ಇವರ ಯಾವ ಸಮಸ್ಯೆಗಳಿಗೂ ಪರಿಹಾರವಿಲ್ಲ ಎಂಬುದನ್ನು ಅರಿತುಕೊಂಡ ಅಂಬೇಡ್ಕರ ಅವರು ೧೯೩೬ರಲ್ಲಿ ''ಸ್ವತಂತ್ರ್ಯ ಕಾರ್ಮಿಕ ಪಕ್ಷ'' ಎಂಬ ರಾಜಕೀಯ ಪಕ್ಷವನ್ನು ಕಟ್ಟುತ್ತಾರೆ. ೧೯೩೭ ಮುಂಬಯಿ ವಿಧಾನಸಭೆ ಚುನಾವಣೆಯಲ್ಲಿ ೧೭ ಸ್ಥಾನಗಳಿಗೆ ಸ್ಪರ್ಧಿಸಿ ೧೫ ಸ್ಥಾನಗಳನ್ನು ಗೆಲ್ಲುತ್ತಾರೆ. ೧೯೪೨ರಲ್ಲಿ ನಾಗಪುರದಲ್ಲಿ ನಡೆದ ಸಮ್ಮೇಳನದ ಸಂದರ್ಭದಲ್ಲಿ ಸ್ಥಾಪನೆಯಾದ ''ಅಖಿಲ ಭಾರತ ಪರಿಶಿಷ್ಟ ಜಾತಿಗಳ ಒಕ್ಕೂಟ''ವನ್ನು ರಾಷ್ಟ್ರ ಮಟ್ಟದ ದಲಿತ ರಾಜಕೀಯ ಪಕ್ಷವನ್ನಾಗಿ ಪರಿವರ್ತಿಸುತ್ತಾರೆ. ೧೯೫೧ರ ಪ್ರಥಮ ಸ್ವಾತಂತ್ರ್ಯ ಭಾರತದ ಚುನಾವಣೆಯಲ್ಲಿ

ಸ್ಪರ್ಧಿಸಿ ಎಲ್ಲಾ ಸ್ಥಾನಗಳಲ್ಲೂ ಅನಿರೀಕ್ಷಿತ ಸೋಲನ್ನು ಅನುಭವಿಸುತ್ತಾರೆ. ೧೯೫೬ ಅಕ್ಟೋಬರ ೨೪ರಂದು ಪರಿಶಿಷ್ಟ ಜಾತಿಗಳ ಒಕ್ಕೂಟವನ್ನು ವಿಸರ್ಜಿಸಿ, ಲೋಹಿಯಾ ಅವರೊಂದಿಗೆ ಚರ್ಚಿಸಿ ಹಿಂದುಳಿದವರು, ರೈತರು, ಕಾರ್ಮಿಕರನ್ನು ಒಳಗೊಂಡಂತೆ 'ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ'[೩೪] ಪಕ್ಷವನ್ನು ಸ್ಥಾಪಿಸುತ್ತಾರೆ. ಭಾರತದ ರಾಜಕೀಯದಲ್ಲಿ ಅಂಬೇಡ್ಕರ ಅವರು ಅನೇಕ ಉನ್ನತ ಹುದ್ದೆಗಳನ್ನು ಅಲಂಕರಿಸಿದರು ಹಾಗೂ ಯಾವುದೇ ರಾಜಕೀಯ ಪಕ್ಷದ ಹತ್ತಿರವೂ ಸುಳಿಯದೇ ದಲಿತರ ಏಳಿಗೆಗಾಗಿ ರಾಜಕೀಯ ಶಕ್ತಿಯಾಗಿ ಬೆಳೆದರು.

ಅದಕ್ಕಾಗಿ ಮೀಸಲಾತಿ ಅಗತ್ಯವನ್ನು ಮೊಟ್ಟ ಮೊದಲ ಬಾರಿಗೆ ಪ್ರತಿಪಾದಿಸಿ ರಾಷ್ಟ್ರ ಮಟ್ಟದಲ್ಲಿ ಈ ಸೌಲಭ್ಯವನ್ನು ಪರಿಶಿಷ್ಟರಿಗೆ ಗಳಿಸಿಕೊಟ್ಟವರು ಬಿ.ಆರ್.ಅಂಬೆಡ್ಕರ್ ಅವರು ರಾಷ್ಟ್ರದ ಸಂವಿಧಾನ ಬರೆಯುವ ಜವಾಬ್ದಾರಿ ಹೊತ್ತು ಮೀಸಲಾತಿಯನ್ನು ಸಂವಿಧಾನ ಬದ್ಧ ಮಾಡಿದರು. ಸಂವಿಧಾನ ಅನುಚ್ಛೇದದಲ್ಲಿನ ಮೀಸಲಾತಿ ಸೌಲಭ್ಯಗಳೆಂದರೆ

೧. ೩೩೦ನೇ ಪರಿಚ್ಛೇದ ಪಾರ್ಲಿಮೆಂಟ ಸದಸ್ಯತ್ವದಲ್ಲಿ ಮೀಸಲಾತಿ ನೀಡಲಾಗಿದೆ.

೨. ೩೩೨ನೇ ಪರಿಚ್ಛೇದದಂತೆ ರಾಜ್ಯಗಳಲ್ಲಿನ, ವಿಧಾನಸಭೆಗಳಲ್ಲಿ ಪರಿಶಿಷ್ಟರಿಗೆ ಮೀಸಲಾತಿ ನೀಡಲಾಗಿದೆ.

೩. ೩೩೪ನೇ ಪರಿಚ್ಛೇದ ಪ್ರತಿ ಹತ್ತು ವರ್ಷಗಳಿಗೊಮ್ಮೆ ಮೀಸಲಾತಿಯ ಮುಂದೂಡಿಕೆಯನ್ನು ಪರಿಷ್ಕರಿಸಲು ಅವಕಾಶ ಮಾಡಿಕೊಟ್ಟಿದೆ. ಅನುಚ್ಛೇದ ೨೪೩ರಂತೆ ಗ್ರಾಮ, ತಾಲ್ಲೂಕು, ಜಿಲ್ಲಾ ಪಂಚಾಯತಗಳಲ್ಲಿ ಪಟ್ಟಣ ಮತ್ತು ನಗರ ಸಭೆಗಳಲ್ಲಿ ಪರಿಶಿಷ್ಟರಿಗೆ ಮೀಸಲಾತಿ ಕಲ್ಪಿಸಲಾಗಿದೆ.

೧೯೫೧ರಲ್ಲಿ ನಡೆದ ಮೊಟ್ಟಮೊದಲ ಚುನಾವಣೆಯಲ್ಲಿ ಜಾರಿಗೆ ಬಂದ ರಾಜಕೀಯದಲ್ಲಿನ ಮೀಸಲಾತಿಯಿಂದಾಗಿ ಪಾರ್ಲಿಮೆಂಟನಲ್ಲಿ ಒಟ್ಟು ೫೪೩ ಸ್ಥಾನಗಳಲ್ಲಿ ಪರಿಶಿಷ್ಟ ಜಾತಿಯ ಪ್ರತಿನಿಧಿಗಳು ೭೯ ಮತ್ತು ಪರಿಶಿಷ್ಟ ವರ್ಗಗಳ ಪ್ರತಿನಿಧಿಗಳು ೪೬ ಹೀಗೆ ಮೀಸಲಾತಿಯಿಂದ ಬಂದ ಪ್ರತಿನಿಧಿಗಳು ಒಟ್ಟು ೧೨೫ ಮಂದಿ ಪಾರ್ಲಿಮೆಂಟಿನಲ್ಲಿ ಇರುತ್ತಾರೆ. ಎಲ್ಲಾ ರಾಜ್ಯಗಳ ವಿಧಾನಸಭೆಯಲ್ಲಿ ಒಟ್ಟು ೪೦೩೬ ಪ್ರತಿನಿಧಿಗಳಿದ್ದು ಇವರಲ್ಲಿ ಪರಿಶಿಷ್ಟ ಜಾತಿ ೫೫೬ ಮತ್ತು ಪರಿಶಿಷ್ಟ ಪಂಗಡ ೫೨೯ ಹೀಗೆ ವಿಧಾನ ಸಭೆಗಳಲ್ಲಿ ಒಟ್ಟು ೧೦೮೫ ಪ್ರತಿನಿಧಿಗಳಿರುತ್ತಾರೆ.[೩೫]

ಅಂಬೇಡ್ಕರ್, ಜಗಜೀವನರಾಂ ಇಬ್ಬರು ಐವತ್ತರ ದಶಕದಲ್ಲಿ ಪರಿಶಿಷ್ಟ ಪ್ರತಿನಿಧಿಗಳ ಕೇಂದ್ರಬಿಂದುವಾಗಿದ್ದರು. ಈ ಜನಾಂಗದ ಸರ್ವತೋಮುಖ ಅಭಿವೃದ್ಧಿಗಾಗಿ ತಮ್ಮ ಜೀವನವನ್ನೇ ತ್ಯಾಗ ಮಾಡಿದರು. ಪರಿಶಿಷ್ಟರ ಸಮಸ್ಯೆಗಳ ಪರಿಹಾರಕ್ಕೆ ಯಾವುದೇ ಕಾಯ್ದೆ ಆಗಬೇಕಾಗಿದ್ದರೆ ಅಥವಾ ಕಾರ್ಯಕ್ರಮದ ರೂಪುರೇಷೆಗಳನ್ನು ತಯಾರು ಮಾಡಬೇಕಾಗಿದ್ದರೆ ಈ ಇಬ್ಬರು ನಾಯಕರುಗಳ ಒಪ್ಪಿಗೆ ಪಡೆಯುವಷ್ಟು ಪ್ರಬಲವಾಗಿ ಈ ರಾಷ್ಟ್ರದ ರಾಜಕಾರಣದಲ್ಲಿ ಗುರುತಿಸಿಕೊಂಡಿದ್ದರು.

ಅಂಬೇಡ್ಕರ್ ಗ್ರಂಥಾಲಯ.
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಈ ನಿಟ್ಟಿನಲ್ಲಿ ಕಾನ್ಷಿರಾಂ ಬಹುಜನ ಶೋಷಿತ ತಳ ಸಮುದಾಯಗಳ ಪರ ಹೋರಾಟ ನಡೆಸಿದ ಬುದ್ಧ, ಪುಲೆ, ಸಾಹು, ನಾಲ್ವಡಿ, ಪೆರಿಯಾರ್, ನಾರಾಯಣ ಗುರು ಮೊದಲಾದ ಬಹಳಷ್ಟು ಸಮಾಜ ಸುಧಾರಕರ ಚಳವಳಿಗಳನ್ನು ತಮ್ಮ ಚಳವಳಿ ಮೂಲಕ ಮುಂದುವರಿಸಿ ಅಂಬೇಡ್ಕರ್ ಅವರ ರಾಜಕೀಯ ತತ್ವ ಸಿದ್ಧಾಂತಗಳನ್ನು ಪ್ರಾಯೋಗಿಕವಾಗಿ ಅಸ್ತಿತ್ವಕ್ಕೆ ತಂದರು. ಮಾಯಾವತಿ ಬಹುಜನ ಪಕ್ಷದ ಮೂಲಕ ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿ ೧೫೦ ದಿನಗಳ ಆಡಳಿತದಲ್ಲಿ ನೂರಾರು ಎಕರೆ ಭೂಮಿಯನ್ನು ಶೋಷಿತರಿಗೆ ಹಂಚಿ ರಾಜಕೀಯ ಅಧಿಕಾರದ ಮಹತ್ವವನ್ನು ತಿಳಿಸಿಕೊಟ್ಟರು. ದಲಿತರು ಸ್ವತಂತ್ರ ರಾಜಕೀಯ ಅಧಿಕಾರ ಶಕ್ತಿ ಪಡೆದರೆ ಏನೆಲ್ಲಾ ಮಾಡಬಹುದು, ಹೇಗೆಲ್ಲಾ ಸಮಾನತೆ, ಸ್ವಾಭಿಮಾನದ, ಸಮೃದ್ಧಿಯ ಸಮಾಜ ಕಟ್ಟಬಹುದು ಎಂಬುದಕ್ಕೆ ಉದಾಹರಣೆಯಾಗಿದ್ದಾರೆ. 130285

ಕರ್ನಾಟಕದಲ್ಲಿ ಬಿ.ಬಸವಲಿಂಗಪ್ಪ ಮತ್ತು ಎನ್.ರಾಚಯ್ಯ ಅವರು ರಾಜಕೀಯದಲ್ಲಿ ಪ್ರಬಲವಾಗಿ ಗುರುತಿಸಿಕೊಂಡರು, ಇವರ ಸಲಹೆ, ಸಹಕಾರ ಮೇರೆಗೆ ಹೊಸ ಕಾನೂನು, ಕಾರ್ಯಕ್ರಮಗಳು ದಲಿತ ವರ್ಗದ ಪರವಾಗಿ ರಾಜ್ಯದಲ್ಲಿ ಜಾರಿಗೆ ಬಂದವು. ದಲಿತ ಚಳವಳಿಗೂ ಇವರ ಸಹಕಾರ ಇತ್ತು. ಆದರೆ ದಲಿತ ಚಳವಳಿಯ ಸ್ಥಾಪಕರುಗಳಾದ ದೇವನೂರು ಮಹದೇವ ಮತ್ತು ಪ್ರೊ. ಬಿ.ಕೃಷ್ಣಪ್ಪ ನಡುವೆ ರಾಜಕೀಯ ಭಿನ್ನಾಭಿಪ್ರಾಯ ಉಂಟಾಗಿ ಕೃಷ್ಣಪ್ಪನವರು ಬಿ.ಎಸ್.ಪಿ. ಪರವಾದರೆ, ದೇವನೂರು ಮಹದೇವ ಜನತಾ ಪಕ್ಷದ ಪರವಾಗಿದ್ದು ದಲಿತ ಚಳವಳಿಯಲ್ಲಿ ಬಿರುಕು ಉಂಟಾಗಲು ಕಾರಣವಾಯಿತು. ಇದರಿಂದ ರಾಜಕೀಯಕ್ಕೆ ದಲಿತ ಸಂಘಟನೆ ಪ್ರವೇಶ ಕುರಿತು ಭಿನ್ನಾಭಿಪ್ರಾಯಗಳಿರುವುದರಿಂದ ದಲಿತ ನಾಯಕರುಗಳು ಮುಕ್ತರಾಗದೆ ಸಂದಿಗ್ಧ ಪರಿಸ್ಥಿತಿಯಲ್ಲಿದ್ದಾರೆ ಎಂದರೆ ತಪ್ಪಾಗಲಾರದು.

ರಾಜ್ಯದಲ್ಲಿ ಬಿ. ಬಸವಲಿಂಗಪ್ಪ ಹಾಗೂ ರಾಚಯ್ಯ ಅವರಂಥ ದಿಟ್ಟ ದಲಿತ ರಾಜಕಾರಣಿಗಳನ್ನು ಬಿಟ್ಟರೆ ಮತ್ತೆ ಅಂತಹ ಯಾವ ರಾಜಕಾರಣಿಗಳು ಬೆಳೆಯಲಿಲ್ಲ. ಮೀಸಲಾತಿ ಕ್ಷೇತ್ರದಿಂದ ಗೆದ್ದರು ತಮ್ಮ ನಿಲುವಿಗೆ ಬಹುಸಂಖ್ಯಾತರಾದ ಉಳ್ಳವರೇ ಕಾರಣರೆಂದು ಅವರ ಸೇವೆಯೇ ಮುಂದಿನ ಭವಿಷ್ಯದ ಅಧಿಕಾರದಲ್ಲಿ ಉಳಿಯುವ ಮಾರ್ಗ ಎಂದು ದಲಿತ ಉದ್ಧಾರದ ಕರ್ತವ್ಯದ ಹೊಣೆಯನ್ನು ಮರೆಯುತ್ತಿದ್ದಾರೆ. ದಲಿತರ ಅಭಿವೃದ್ಧಿ ಕಾರ್ಯಗಳಿಗೆ ಮೀಸಲಾದ ಹಣ ಉಪಯೋಗವಾಗದೆ ಬೇರೆ ಅನುತ್ಪಾದಿತ ಕಾರ್ಯಗಳಿಗೆ ಹೋಗುವುದನ್ನು ತಪ್ಪಿಸುವಲ್ಲಿ ದಲಿತ ರಾಜಕಾರಣಿಗಳು ವಿಫಲವಾಗಿದ್ದಾರೆ. ಹಾಗಾಗಿ ದಲಿತ ರಾಜಕಾರಣಿಗಳು ಅಂಬೇಡ್ಕರ್ ಅವರ ಮೂಲ ಉದ್ದೇಶಗಳನ್ನು, ಕಾರ್ಯವೈಖರಿಯನ್ನು, ಹೋರಾಟದ ದಾರಿಯನ್ನು ಮೆಲುಕು ಹಾಕುತ್ತ ಬಡವರ ಸೇವೆ ಮಾಡಿದಾಗ ಮಾತ್ರ ಅವರು ಮೀಸಲಾತಿ ಸ್ಥಾನದಿಂದ ಗೆದ್ದು ಬಂದುದಕ್ಕೆ ಸಾರ್ಥಕವಾಗುತ್ತದೆ. ಬಡವರ ಸೇವೆಯಲ್ಲಿ ದೇಶದ ಏಳಿಗೆ ಇದೆ ಎಂಬುದನ್ನು ಮರೆಯಬಾರದು.

ಈ ರೀತಿ ಅಂಬೇಡ್ಕರ ಅವರು ರಾಜಕೀಯ ಮೀಸಲಾತಿ ದೊರಕಿಸಿಕೊಟ್ಟಿದ್ದರು ಅದರ ಸರಿಯಾದ ಸದುಪಯೋಗ ಆಗುತ್ತಿಲ್ಲ. ಏಕೆಂದರೆ ರಾಜಕೀಯ ಅಧಿಕಾರದ ಚುಕ್ಕಾಣಿ ಹಿಂದಿರುವ ಮೇಲ್ವರ್ಗದ

ಅಧಿಕಾರಿಗಳು ಮೀಸಲಾತಿ ಅನ್ವಯ ಉತ್ತಮ ದಲಿತ ನಾಯಕ, ರಾಜಕೀಯ ಅಧಿಕಾರ ಹಿಡಿದರೆ ಮುಂದೊಂದು ದಿನ ದೊಡ್ಡದಾಗಿ ಬೆಳೆದು ತಮ್ಮ ಭವಿಷ್ಯಕ್ಕೆ ಅಡ್ಡಗಾಲು ಆಗುತ್ತಾನೆ, ಎಂಬ ಲೆಕ್ಕಾಚಾರ ಮಾಡಿ ಮೀಸಲಾತಿ ಕ್ಷೇತ್ರದ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಅಸ್ಪೃಶ್ಯರಲ್ಲದ ಮತ್ತು ಮೇಲ್ವರ್ಗಕ್ಕೆ ಹತ್ತಿರ ಇರುವ ಜಾತಿಗಳಾದ ಭೋವಿ, ಲಂಬಾಣಿ, ಇತ್ಯಾದಿ ಉಪಜಾತಿಗಳ ಅಭ್ಯರ್ಥಿಗಳಿಗೆ ಹೆಚ್ಚಿನ ಆಧ್ಯತೆ ನೀಡಿ ಹೆಚ್ಚು ಜನಸಂಖ್ಯೆ ಇರುವ ಮತ್ತು ಅಸ್ಪೃಶ್ಯರಾಗಿರುವ ಹೊಲೆಯ, ಮಾದಿಗ ಜಾತಿಗಳನ್ನು ಕಡೆಗಣಿಸುತ್ತಿರುವುದು ಸ್ಪಷ್ಟವಾಗಿದೆ. ಈ ವರ್ಗದವರು ಸಂಘಟನೆ, ಚಳವಳಿ, ಹೋರಾಟಗಳನ್ನು ಮಾಡುತ್ತಿದ್ದು ಇವೆಲ್ಲವುಗಳನ್ನು ಗಂಭೀರವಾಗಿ ಪರಿಗಣಿಸಿ ರಾಜಕೀಯ ಅಧಿಕಾರದಿಂದ ದೂರ ಇಟ್ಟು ಜಾತಿ ಉಪಜಾತಿಗಳಲ್ಲೆ ಒಡೆದು ಆಳುವ ನೀತಿ ತಂತ್ರ ಉಪಯೋಗಿಸಿ ಮೀಸಲಾತಿ ಒಳಮೀಸಲಾತಿ ಎಂಬ ಬೀಜ ಬಿತ್ತಿ ದಲಿತರನ್ನು ಹತ್ತಿಕ್ಕುವ ಹುನ್ನಾರ ನಡೆದಿದೆ. ಮೀಸಲಾತಿ ಇದ್ದರು ತೀರಾ ಅಸ್ಪೃಶ್ಯರು ರಾಜಕೀಯ ಸ್ಥಾನಕ್ಕಾಗಿ ಹೋರಾಡುವ ಸ್ಥಿತಿ ಒದಗಿ ಬಂದಿದೆ.

ಕರ್ನಾಟಕ ರಾಜಕೀಯ ಸ್ಥಿತಿಯಲ್ಲಿ ಬಾಗಲಕೋಟೆ ಜಿಲ್ಲೆಯನ್ನು ಅನುಲಕ್ಷಿಸಿದಾಗ ದಲಿತರಿಗೆ ರಾಜಕೀಯ ಸ್ಥಾನ ದೊರಕಿದ್ದು ೧೯೭೮ರಿಂದ. ಮುಧೋಳ ತಾಲ್ಲೂಕು ಮೀಸಲಾತಿ ಕ್ಷೇತ್ರವಾಗಿದ್ದು, ದಲಿತರು ರಾಜಕೀಯವಾಗಿ ತಮ್ಮ ಜನಾಂಗದ ಅಭಿವೃದ್ಧಿಗಾಗಿ ಶ್ರಮಿಸಲಿ ಎಂದು ಮೀಸಲು ಕ್ಷೇತ್ರದಿಂದ ದಲಿತ ರಾಜಕೀಯ ನಾಯಕರ ಆಯ್ಕೆ ನಡೆಯುತ್ತದೆ. ೧೯೭೮ ರಿಂದ ಮೀಸಲು ಕ್ಷೇತ್ರದಿಂದ ಆಯ್ಕೆಯಾದ ರಾಜಕಾರಣಿಗಳೆಂದರೆ.

| ವರ್ಷ | ರಾಜಕೀಯ ನಾಯಕರು |
|---|---|
| ೧೯೭೮ರ ಚುನಾವಣೆಯಲ್ಲಿ | ಜಯವಂತ ಹಾದಿಮನಿ |
| ೧೯೮೩ರ ಚುನಾವಣೆಯಲ್ಲಿ | ಅಶೋಕ ಕಟ್ಟಿಮನಿ |
| ೧೯೮೫ರ ಮಧ್ಯಂತರ ಚುನಾವಣೆಯಲ್ಲಿ | ಭೀಮಪ್ಪ ಜಮಖಂಡಿ |
| ೧೯೮೯ರ ಮಧ್ಯಂತರ ಚುನಾವಣೆಯಲ್ಲಿ | ರಾಮಪ್ಪ ತಿಮ್ಮಾಪುರ |
| ೧೯೯೪ರ ಚುನಾವಣೆಯಲ್ಲಿ | ಗೋವಿಂದ ಕಾರಜೋಳ |
| ೧೯೯೯ರ ಚುನಾವಣೆಯಲ್ಲಿ | ರಾಮಪ್ಪ ತಿಮ್ಮಾಪುರ |
| ೨೦೦೪ರ ಚುನಾವಣೆಯಲ್ಲಿ | ಗೋವಿಂದ ಕಾರಜೋಳ |
| ೨೦೦೯ರ ಚುನಾವಣೆಯಲ್ಲಿ | ಗೋವಿಂದ ಕಾರಜೋಳ |

೨೦೦೯ರ ಚುನಾವಣೆ ನಿಯಮದಂತೆ ಬಾಗಲಕೋಟೆ ಜಿಲ್ಲೆಯಲ್ಲಿ ಏಳು ಎಂ.ಎಲ್.ಎ. ಮತಕ್ಷೇತ್ರಗಳಿದ್ದು ಆದರಲ್ಲಿ ಒಂದು ಮೀಸಲಾತಿ ಕ್ಷೇತ್ರವಾಗಿದೆ. ಮುಧೋಳ ತಾಲ್ಲೂಕಿಗೆ ಸಂಬಂಧಿಸಿದಂತೆ ಇಲ್ಲಿಯವರೆಗೂ

ಆಯ್ಕೆಯಾದ ದಲಿತ ರಾಜಕಾರಣಿಗಳು ದಲಿತರನ್ನು ದಾಸ್ಯದಿಂದ ಮುಕ್ತಿಗೊಳಿಸುವಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಿಲ್ಲ. ಈ ಭಾಗದ ದಲಿತರ ವಿಮೋಚನೆಗಾಗಿ ಅನೇಕ ಪ್ರಯತ್ನಗಳು ನಡೆದರು ಕೂಡಾ ಸಾಧನೆ ಮಾತ್ರ ಕಡಿಮೆ ಎಂದೇ ಹೇಳಬಹುದು. ಜಮೀನ್ದಾರ ವರ್ಗ ಬಲಿಷ್ಠವಾಗಿರುವ ಪ್ರದೇಶಗಳಲ್ಲಿ ದಲಿತರು ಯಾವ ಅಧಿಕಾರದಲ್ಲಿದ್ದರು ಬಹುಸಂಖ್ಯಾತರಾದ ಮೇಲ್ವರ್ಗದವರ ಹಿತಾಶಕ್ತಿಯಂತೆ ಕೆಲಸ ಮಾಡುವ ಅನಿವಾರ್ಯತೆ ದಲಿತ ರಾಜಕಾರಣಿಗಳಿಗೆ ಇದೆ.

ವಿಜಾಪುರದ ಕಾಕಾ ಕಾರ್ಖಾನಿಸರವರು ಮೇಲ್ವರ್ಗದವರ ವಿರೋಧ ಕಟ್ಟಿಕೊಂಡ ದಲಿತರಿಗೆ ವಿಧ್ಯಾದಾನ ಮಾಡಿದ ಅವರ ಪರಿಶ್ರಮ ಈ ಭಾಗದ ದಲಿತರು ಮರೆಯುವಂತಿಲ್ಲ. ಇಂತಹ ಸಾಧಕರಿಗೂ ಇಲ್ಲಿ ಪ್ರೋತ್ಸಾಹ ಸಿಗದೇ ಇರುವುದು ಈ ಭಾಗದ ದಲಿತರ ದುರಾದೃಷ್ಟವಾಗಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದು ಅರವತ್ತು ದಶಕಗಳಾದರು ಇಲ್ಲಿನ ದಲಿತರಿಗೆ ದೇವಾಲಯಗಳಲ್ಲಿ ಪ್ರವೇಶ ಇಲ್ಲ, ಹೊಟೇಲುಗಳಲ್ಲಿ ಚಹಾ ಸಿಕ್ಕುತ್ತಿಲ್ಲ. ಇಂತಹ ಸಮಸ್ಯೆಗಳ ವಿರುದ್ಧ ದಲಿತರು ಇಂದಿಗೂ ಹೋರಾಡುತ್ತಿರುವುದನ್ನು ನೋಡಿದರೆ ಮೀಸಲಾತಿ ಕ್ಷೇತ್ರದಿಂದ ದಲಿತ ರಾಜಕಾರಣಿಗಳು ಆಯ್ಕೆಯಾದರೂ ಅದು ನಾಮಕಾವಸ್ಥೆ ಎಂಬುದು ಸ್ಪಷ್ಟವಾಗುತ್ತದೆ.

ಜಿಲ್ಲೆಯ ಬಹುಸಂಖ್ಯಾತರಾದ ಸವರ್ಣಿಯರು ದಲಿತ ರಾಜಕಾರಣಿಗಳನ್ನು ಹಿಡಿತದಲ್ಲಿಟ್ಟುಕೊಂಡಿರುವರು. ಕೆಲವು ನಾಯಕರಂತೂ ತಮ್ಮನ್ನು ಉಳ್ಳವರ ಜೊತೆ ಗುರುತಿಸಿಕೊಂಡಿದ್ದು ದಲಿತರ ಅಭಿವೃದ್ಧಿಗಾಗಿ ಬಂದಿರುವ ಕಾರ್ಯಕ್ರಮಗಳ ಅನುಷ್ಠಾನಗಳನ್ನು ಸರಿಯಾಗಿ ಜಾರಿಯಾಗಿ ದಲಿತರನ್ನು ತಲುಪದೆ ಹೋಗಿರುವುದು ಅವರ ಗಮನಕ್ಕೆ ಬಾರದ ವಿಷಯವಾಗಿದೆ. ಅಧಿಕಾರದಿಂದ ನಮ್ಮವರ ದಾಸ್ಯ ಬಿಡುಗಡೆಗೆ ಪ್ರಯತ್ನಿಸಬೇಕೆಂಬುದನ್ನು ಮರೆಯುತ್ತಿದ್ದಾರೆ. ಜಿಲ್ಲಾ ದಲಿತ ಸಂಘರ್ಷ ಸಮಿತಿ ಪ್ರಬಲವಾಗಿ ಸಾವಳಗಿ ಗೋಲಿಬಾರ ಪ್ರಕರಣದಲ್ಲಿ ಜಮಖಂಡಿ ಶಾಸಕ ಬಾಬುರಾವ್ ತುಂಗಳ ಅವರನ್ನು ಖಂಡಿಸಿದಾಗ ದಲಿತ ರಾಜಕಾರಣಿಗಳು ಸಂಪೂರ್ಣವಾಗಿ ದಲಿತ ನಾಯಕರನ್ನು ಬೆಂಬಲಿಸದಿರುವುದು ವಿಪರ್ಯಾಸವಾಗಿದೆ. ತುಂಗಳ ಅವರ ಅಭಿಪ್ರಾಯದಂತೆ ದಲಿತರು ಮತ್ತು ಸವರ್ಣೀಯರ ಮಧ್ಯ ಯಾವ ಭಿನ್ನಾಭಿಪ್ರಾಯವಿಲ್ಲ. ಪೊಲೀಸರೇ ವಿನಾಕಾರಣ ಗೋಲಿಬಾರ ಮಾಡಿದ್ದಾರೆ. ಆದ ಕಾರಣ ಪೊಲೀಸ ಅಧಿಕಾರಿಗಳನ್ನು ಅಮಾನತ್ತಿನಲ್ಲಿಡಬೇಕು ಎಂದು ವಾದಿಸಿದರು. ಅದು ಸತ್ಯಕ್ಕೆ ದೂರವಾದ ಮಾತು. ಏಕೆಂದರೆ ಎರಡು ಸಾವಿರ ಜನ ದಲಿತರ ವಿರುದ್ಧ ಮಾರಕಾಸ್ತ್ರ ಹಿಡಿದು ಬಂದರೆ ಪೊಲೀಸರು ಏನು ಮಾಡದೆ ಸುಮ್ಮನಿರಬೇಕಾಗಿತ್ತೆ? ಹಾಗಾದರೆ ದಲಿತರ ಪ್ರಾಣಕ್ಕೆ ರಕ್ಷಣೆ ಇಲ್ಲವೆ ಎಂಬ ಪ್ರಶ್ನೆಗಳು ಸಾಮಾನ್ಯವಾಗಿ ಹುಟ್ಟುತ್ತವೆ.

ಉಳ್ಳವರು ಬಂಡವಾಳ ಶಾಹಿಗಳೇ ಬಹುಸಂಖ್ಯಾತರಾಗಿರುವ ಈ ಪ್ರದೇಶದಲ್ಲಿ ದಲಿತ ಸಂಘರ್ಷ ಸಮಿತಿ ಹುಟ್ಟಿದ್ದು ತಡವಾದರೂ ಅದರ ಶಮನ ಮಾತ್ರ ಅಲ್ಪಾವಧಿಯಲ್ಲೆ ಕಂಡಿತು. ಕಾರಣ ರಾಜ್ಯ ದಲಿತ ಸಂಘರ್ಷ

ಸಮಿತಿ ತೊಂಭತ್ತರ ದಶಕದಲ್ಲಿ ರಾಜಕೀಯ ವಿಚಾರಗಳಿಂದ ಇಬ್ಬಾಗವಾಯಿತು. ಇದರ ಪ್ರಭಾವ ಜಿಲ್ಲೆಯ ಮೇಲೂ ಬೀರಿತು. ಜಿಲ್ಲಾ ದಲಿತ ನಾಯಕರು ಸಂಘಟನೆಯಲ್ಲಿ ಗುರುತಿಸಿಕೊಳ್ಳುವದಕ್ಕಿಂತ ಹೆಚ್ಚಾಗಿ ಸ್ಥಳೀಯ ರಾಜಕೀಯದಲ್ಲಿ ತಮ್ಮನ್ನು ಗುರುತಿಸಿಕೊಳ್ಳತೊಡಗಿದರು. ಹಣ, ಆಸ್ತಿ, ಅಧಿಕಾರವನ್ನು ರಾಜಕೀಯದಿಂದ ಪಡೆದುಕೊಳ್ಳಲಾರಂಭಿಸಿದ್ದರಿಂದ ದಲಿತ ಚಳವಳಿ ನಿರ್ಲಕ್ಷಕ್ಕೆ ಒಳಗಾಯಿತು. ದಲಿತ ಸಮಸ್ಯೆಗಳನ್ನು ರಾಜಕೀಯವಾಗಿಯೇ ಪರಿಹರಿಸುವಲ್ಲಿ ಪ್ರಯತ್ನ ಪಟ್ಟರು ಅವುಗಳಿಗೆ ನ್ಯಾಯ ದೊರಕದೆ ಉಳ್ಳವರ ಮತ್ತು ದಲಿತರ ನಡುವಿನ ಸಂಧಾನದ ಮಾತುಕತೆಗಳಲ್ಲಿ ಕೊನೆಗೊಳ್ಳುತ್ತವೆ. ಇದರಿಂದಾಗಿ ಜಿಲ್ಲೆಯ ದಲಿತ ಜನಾಂಗ ಯಾವುದೇ ಸಮಸ್ಯೆಗಳನ್ನು ದಲಿತ ನಾಯಕರ ಹತ್ತಿರ ತೆಗೆದುಕೊಂಡು ಹೋಗದೆ ತಾವೇ ಮೇಲ್ವರ್ಗದವರೊಂದಿಗೆ ರಾಜೀಮಾಡಿಕೊಳ್ಳುತ್ತ ಪರಿಸ್ಥಿತಿಗೆ ಹೊಂದಿಕೊಂಡು ಬದುಕುತ್ತಿರುವುದು ಕಂಡುಬರುತ್ತದೆ.

ಶೈಕ್ಷಣಿಕ, ಸಾಮಾಜಿಕ, ರಾಜಕೀಯ, ಆರ್ಥಿಕವಾಗಿ ಎಲ್ಲ ಕ್ಷೇತ್ರಗಳಲ್ಲಿ ಬಾಗಲಕೋಟೆ ಜಿಲ್ಲೆ ಅಭಿವೃದ್ಧಿ ಹೊಂದಿರಬಹುದು ಆದರೆ ದಲಿತರು ಯಾವುದೇ ಕ್ಷೇತ್ರದಲ್ಲಿ ಅಭಿವೃದ್ಧಿ ಕಾಣದಿರುವುದು ಈ ಭಾಗದ ದಲಿತ ರಾಜಕಾರಣಿಗಳ ವೈಫಲ್ಯತೆಯನ್ನು ತೋರಿಸುತ್ತದೆ. ಸಣ್ಣ-ಪುಟ್ಟ ಅಭಿವೃದ್ಧಿ ಕಾರ್ಯಗಳು ನಡೆದಿರಬಹುದು. ಅವು ದಲಿತರ ಸಮಸ್ಯೆಗಳಿಗೆ ಪರಿಹಾರ ಅಲ್ಲ. ದೌರ್ಜನ್ಯ, ಬಹಿಷ್ಕಾರ, ಅತ್ಯಾಚಾರಗಳಂತಹ ಅನಾಗರಿಕ ಪದ್ಧತಿಗಳು ಈಗಲೂ ಇರುವುದು ಇದಕ್ಕೆ ಸಾಕ್ಷಿಯಾಗಿದೆ.

## ಅಡಿ ಟಿಪ್ಪಣಿಗಳು

೧. ಚಾಂಡಾಳ, ೧೯೯೨, ಕರ್ನಾಟಕ ದಲಿತ ಚಳವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್, ಚೈತ್ರ ಪ್ರಕಾಶನ, ಕೋಲಾರ, ಪು.೬೭

೨. ನಾಗರಾಜ್.ಎಂ.ಜಿ., ೨೦೦೬, ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು, (ಸಂ-೨), ಕರ್ನಾಟಕ ವಿಧಾನಸೌಧ, ಬೆಂಗಳೂರು, ಪು.೨೭೪

೩. ಬಿಜಾಪುರ ದಲಿತ ಸಂಘರ್ಷ ಸಮಿತಿ, ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ ಮನವಿ, ದಿನಾಂಕ.೦೬.೧೧.೧೯೯೮

೪. ಬಿಜಾಪುರ ದಲಿತ ಸಂಘರ್ಷ ಸಮಿತಿ, ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ ಮನವಿ, ದಿನಾಂಕ.೧೮.೧೦.೧೯೯೮

೫. ಬಿಜಾಪುರ ದಲಿತ ಸಂಘರ್ಷ ಸಮಿತಿ, ರಾಜ್ಯ ಸಮಿತಿ ಪತ್ರ, ದಿನಾಂಕ.೧೧.೦೪.೧೯೯೮

೬. ಬಾಗಲಕೋಟೆ ದಲಿತ ಸಂಘರ್ಷ ಸಮಿತಿ, ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ ಮನವಿ, ದಿನಾಂಕ.೨೫.೦೫.೨೦೦೭

೭. ಬಾಗಲಕೋಟೆ ದಲಿತ ಸಂಘರ್ಷ ಸಮಿತಿ, ಲೋಕಾಯುಕ್ತರಿಗೆ ಸಲ್ಲಿಸಿದ ಮನವಿ, ದಿನಾಂಕ.೧೬.೧೦.೨೦೦೮

೮. ಚಾಂಡಾಳ, ೧೯೯೨ ಕರ್ನಾಟಕ ದಲಿತ ಚಳವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್, ಚೈತ್ರ ಪ್ರಕಾಶನ ಕೋಲಾರ, ಪು.೭೫

೯. ಮುನಿಸ್ವಾಮಿ.ಆಲ್ (ಪ್ರ.ಸಂ.), ೧೯೯೭ ಬಿಜಾಪುರ ಜಿಲ್ಲಾ ಗ್ಯಾಜೆಟಿಯರ್, ಕರ್ನಾಟಕ ಸರ್ಕಾರ, ಪು.೬೮೦

೧೦. ವೀರಯ್ಯ.ಡಿ.ಎಸ್., ದಲಿತ ಚಿಂತನ ವೈಚಾರಿಕ ಲೇಖನಗಳ ಸಂಕಲನ, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ಪು.೧೨೫

೧೧. ಚಿನ್ನಸ್ವಾಮಿ ಸೋಸಲೆ.ಎನ್., ೨೦೦೬, ದಲಿತರ ಮೇಲಿನ ದೌರ್ಜನ್ಯ ಒಂದು ನೋಟ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೭

೧೨. ಪೋತೆ.ಎಚ್.ಟಿ., ೨೦೦೮, ಶರಣ ಸಂಸ್ಕೃತಿ ಸಂವಾದ, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ಪು.೮೬

೧೩. ಬಿಜಾಪುರ ದಲಿತ ಸಂಘರ್ಷ ಸಮಿತಿ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ ಮನವಿ, ದಿನಾಂಕ.೧೭.೦೫.೧೯೯೦

೧೪. ಬಿಜಾಪುರ ದಲಿತ ಸಂಘರ್ಷ ಸಮಿತಿ, ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ ಮನವಿ, ದಿನಾಂಕ.೦೩.೦೬.೧೯೯೩

೧೫. ಚಿನ್ನಸ್ವಾಮಿ ಸೋಸಲೆ.ಎನ್., ೨೦೦೬, ಪ್ರಭುತ್ವ ಮತ್ತು ದಲಿತರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೭

೧೬. ಚಿನ್ನಸ್ವಾಮಿ ಸೋಸಲೆ.ಎನ್., ೨೦೦೮, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೯

೧೭. ಚಾಂಡಾಳ, ೧೯೯೨, ಕರ್ನಾಟಕ ದಲಿತ ಚಳವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್, ಚೈತ್ರ ಪ್ರಕಾಶನ, ಕೋಲಾರ, ಪು.೮೫

೧೮. ಕರ್ನಾಟಕ ಸೌಹಾರ್ದ ವೇದಿಕೆ ಬಾಗಲಕೋಟೆ, ದಿನಾಂಕ.೨೨.೧೧.೨೦೦೭

೧೯. ಬಿಜಾಪುರ ದಲಿತ ಸಂಘರ್ಷ ಸಮಿತಿ ವರದಿ ಪತ್ರ, ದಿನಾಂಕ.೧೦.೦೨.೧೯೮೯

೨೦. ಚಾಂಡಾಳ, ಮೇಲಿನದೇ ಪು.೮೬

೨೧. ಚಂದ್ರಶೇಖರ.ಟಿ.ಆರ್. (ಸಂ), ೨೦೦೫, ದಲಿತ ಅಧ್ಯಯನ, (ಲೇ) ಲಕ್ಷ್ಮಣ್ ತೆಲಗಾವಿ, ಟಿ.ಆರ್.ಚಂದ್ರಶೇಖರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೦೩

೨೨. ಕರ್ನಾಟಕದ ಡೊಂಬರು ಒಂದು ಅಲೆಮಾರಿ ಸಮುದಾಯದ ಅಧ್ಯಯನ, ಪ್ರಕಟಿತ ಪಿಎಚ್.ಡಿ. ಪ್ರಬಂಧ ೨೦೦೬, ಪು.೧೬೨

೨೩. ಶೈಲಜ ಹಿರೇಮಠ, ೨೦೦೩, ಸ್ತ್ರೀಕಥನ, ಭುವನ ಪ್ರಕಾಶನ ಹೊಸಪೇಟೆ, ಪು.೬೪

೨೪. ಸಂಯುಕ್ತ ಕರ್ನಾಟಕ, ದಿನಾಂಕ.೧೮.೦೩.೧೯೯೦

೨೫. ಶೈಲಜ ಹಿರೇಮಠ, ಮೇಲಿನದೇ, ಪು.೭೨

೨೬. ಬಾಗಲಕೋಟೆ ದಲಿತ ಸಂಘರ್ಷ ಸಮಿತಿ, ಪ್ರಧಾನ ಮಂತ್ರಿಗಳಿಗೆ ಸಲ್ಲಿಸಿದ ಮನವಿ, ದಿನಾಂಕ.೨೬.೦೧.೨೦೦೫

೨೭. ಮೊಗಳ್ಳಿ ಗಣೇಶ, ೨೦೦೬, ದಲಿತ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೩೩

೨೮. ಬಾಗಲಕೋಟೆ ದಲಿತ ಸಂಘರ್ಷ ಸಮಿತಿ, ಪತ್ರಿಕೆ ಪ್ರಕಟಣೆ, ದಿನಾಂಕ.೨೫.೦೮.೨೦೦೬

೨೯. ಬಾಗಲಕೋಟೆ ದಲಿತ ಸಂಘರ್ಷ ಸಮಿತಿ, ಮುಖ್ಯಮಂತ್ರಿಗಳಿಗೆ ಸಲ್ಲಿಸಿದ ಮನವಿ, ದಿನಾಂಕ.೨೨.೦೮.೨೦೦೬

೩೦. ವಿಜಯ ಕರ್ನಾಟಕ ದಿನಪತ್ರಿಕೆ ೨೨.೧೦.೨೦೦೭

೩೧. ಕರ್ನಾಟಕ ಟಾಯಿಮ್ಸ್, ದಿನಪತ್ರಿಕೆ ೧೯.೦೮.೨೦೦೧

೩೨. ಪ್ರಜಾವಾಣಿ ದಿನಪತ್ರಿಕೆ ೧೦.೦೧.೧೯೯೮

೩೩. ವೀರವಾಣಿ ಪತ್ರಿಕೆ ೨೦.೦೮.೨೦೦೫

೩೪. ಮಹಾದೇವಯ್ಯ.ಪಿ. (ಸಂ), ೨೦೦೫, ದಲಿತರು ಮತ್ತು ಪರ್ಯಾಯ ರಾಜಕಾರಣ, (ಲೇ), ಮಹದೇವ ಶಂಕನಪುರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.೨೨೮

೩೫. ವೀರಯ್ಯ.ಡಿ.ಎಸ್., ೨೦೦೫, ದಲಿತ ಚಿಂತನೆ, ವೈಚಾರಿಕ ಲೇಖನಗಳ ಸಂಕಲನ, ಸ್ವಪ್ನ ಬುಕ್‌ಹೌಸ್ ಬೆಂಗಳೂರು, ಪು.೧೨೦

* * *

ಅಧ್ಯಾಯ ನಾಲ್ಕು

# ಸಮಕಾಲೀನ ಸಂದರ್ಭದಲ್ಲಿ ದಲಿತ ಚಳವಳಿ

## ಅಧ್ಯಾಯ ನಾಲ್ಕು

# ಸಮಕಾಲೀನ ಸಂದರ್ಭದಲ್ಲಿ ದಲಿತ ಚಳವಳಿ

ದಲಿತ ಚಳವಳಿಗೆ ಸುದೀರ್ಘವಾದ ಚರಿತ್ರೆಯಿದೆ. ಯಾವ ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮಾನತೆ, ಶೋಷಣೆ, ತಾರತಮ್ಯ ಹಾಗೂ ಅನ್ಯಾಯಗಳು ಇರುತ್ತವೆಯೋ ಅವುಗಳ ವಿರುದ್ಧ ಅಸಹನೆ, ಆಕ್ರೋಶ, ಪ್ರತಿಭಟನೆ, ಹೋರಾಟ ಮತ್ತು ಚಳವಳಿಗಳು ಸಾಮಾನ್ಯವಾಗಿ ಎದುರಾಗುತ್ತವೆ. ಇಂಥ ಸಾಮಾಜಿಕ ವ್ಯವಸ್ಥೆಯಲ್ಲಿರುವ ದಲಿತರು ಸಹಜವಾಗಿಯೇ ತಮಗಾಗುವ ಅನ್ಯಾಯ, ದಮನ, ದಬ್ಬಾಳಿಕೆಗೆ ಕಾರಣಗಳೇನು ಮತ್ತು ಅವುಗಳಿಗೆ ಪರಿಹಾರಗಳೇನು ಎಂದು ಆಲೋಚಿಸಿದಾಗ ಅವುಗಳ ವಿರುದ್ಧ ಹೋರಾಟ ಶುರುವಾಗುತ್ತದೆ. ಭಾರತೀಯ ಸಮಾಜದಲ್ಲಿ ಇಂತಹ ಹೋರಾಟಕ್ಕೆ ಇತಿಹಾಸ ಇರುವುದು ಎಲ್ಲರಿಗೂ ತಿಳಿದಿರುವ ವಿಷಯ. ಆದರೂ ದಲಿತರು ತಮಗೆ ಸಿಗಬೇಕಾದ ಹಕ್ಕುಗಳಿಗಾಗಿ ಇಂದಿಗೂ ಚಳವಳಿ ಮಾಡುತ್ತಿದ್ದು, ಹಿಂದೂ ಸಮಾಜ ವ್ಯವಸ್ಥೆಯ ದುರಾಡಳಿತ ಕ್ರಮವನ್ನು ತೋರಿಸುತ್ತದೆ. ಶತಮಾನಗಳಿಂದ ಕೆಳವರ್ಗದವರನ್ನು ಶೋಷಣೆಗೆ ಗುರಿಪಡಿಸಲಾಗುತ್ತಿದ್ದು ಅವುಗಳ ವಿರುದ್ಧ ಹೋರಾಟಗಳು ನಿರಂತರವಾಗಿ ನಡೆಯುತ್ತಲೇ ಇವೆ. ಇಂದಿನ ಪ್ರಚಲಿತ ಸಂದರ್ಭದಲ್ಲಿ ದಲಿತ ಚಳವಳಿ ಜಾಗತೀಕರಣ, ಆಧುನೀಕರಣ, ಖಾಸಗೀಕರಣ, ಮೀಸಲಾತಿ, ದಲಿತ ಮಹಿಳೆ, ದಲಿತರ ಮೇಲಿನ ದೌರ್ಜನ್ಯ ಮುಂತಾದ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ದಲಿತ ಚಳವಳಿ ತನ್ನನ್ನು ಹೇಗೆ ತೊಡಗಿಸಿಕೊಂಡಿದೆ ಎನ್ನುವುದನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

### ಜಾಗತೀಕರಣ

ಜಾಗತೀಕರಣ ಎನ್ನುವುದು ವಿಶ್ವ ಆರ್ಥಿಕ ಸಂಬಂಧಗಳು ವಿಶ್ವ ರಾಜಕೀಯ ಸಂಪರ್ಕದಿಂದ ಹಳೆಯ ಜಗತ್ತಿನ ಹಿಂದುಳಿದ ಸಮುದಾಯಗಳ ಜೊತೆಗೆ ರೂಪಿಸಿಕೊಳ್ಳುತ್ತಿರುವ ಆಧುನಿಕ ಸಾಂಸ್ಕೃತಿಕ ರೂಪಾಂತರಗಳ ವಿಕಾಸವಾಗಿದೆ.[1] ದಲಿತ ಚಳವಳಿಗಳು ಜಾಗತೀಕರಣಗೊಳ್ಳುತ್ತಿದ್ದು ವಿಶ್ವದ ಬೇರೆ ರಾಷ್ಟ್ರಗಳಲ್ಲಿ ವರ್ಗ, ವರ್ಣ

ಸಂಘರ್ಷಗಳ ಸಮಸ್ಯೆಗಳಿಗೆ ಸ್ಪಂದಿಸುವ ಶಕ್ತಿಯನ್ನು ಹೊಂದಿದ್ದು, ಚಳವಳಿಗಳು ಜಾಗತೀಕರಣಗೊಳ್ಳುತ್ತಿರುವ ಸಮಸ್ಯೆಗಳನ್ನು ಎದುರಿಸುವ ಸ್ಥಿತಿಯಲ್ಲಿವೆ. ''ಜಾಗತೀಕರಣದ ಸಂದರ್ಭದಲ್ಲಿ ಜಾತೀಯತೆ ಹೋಗುತ್ತದೆ, ಅಸಮಾನತೆ ತೊಲಗುತ್ತದೆ ಎಂದರೆ ಜಾಗತೀಕರಣವನ್ನು ಖಂಡಿತವಾಗಿ ಒಪ್ಪಿಕೊಳ್ಳಬಹುದು. ಆದರೆ ಜಾತಿವ್ಯವಸ್ಥೆ ಭಯಂಕರವಾಗಿ ಅಪಮಾನ ಮತ್ತು ರೋಗದಿಂದ ನರಳುತ್ತಿದೆ. 'ಹೆತ್ತವಳಿಗೆ ಗೊತ್ತು ಹೆರಿಗೆ ನೋವು' ಎನ್ನುವ ಹಾಗೆ ಯಾರು ಅಸ್ಪೃಶ್ಯತೆ ಅನುಭವಿಸಿರುತ್ತಾರೋ ಅವರಿಗೆ ಗೊತ್ತು ಅಸ್ಪೃಶ್ಯರ ನೋವು. ಜಾಗತೀಕರಣ ಇದೆಲ್ಲವನ್ನು ಹೋಗಲಾಡಿಸುತ್ತದೆ ಎಂದರೆ ಖಂಡಿತವಾಗಿಯೂ ಜಾಗತೀಕರಣವನ್ನು ಸ್ವಾಗತಿಸಬಹುದು. ಜಾಗತೀಕರಣ ಉಳ್ಳವರ ಮಡಿಲಿಗೆ ಬಂದರೆ ಅದರ ಅವಶ್ಯಕತೆ ದಲಿತರಿಗೆ ಇಲ್ಲ. (ಸಂದರ್ಶನ ಪೋತೆ.ಎಚ್.ಟಿ., ೨೦೦೯) ಇವರ ಅಭಿಪ್ರಾಯದಂತೆ ಉನ್ನತ ಜಾತಿಯವರಲ್ಲಿ ಇಂದಿಗೂ ಜಾತೀಯತೆ ತಾಂಡವವಾಡುತ್ತಿದೆ. ಜಾಗತೀಕರಣದಿಂದ ಎಲ್ಲವೂ ವಿಸ್ತಾರಗೊಳ್ಳುತ್ತಿರುವಾಗ ಜಾತಿ ಪದ್ಧತಿ ನಾಶವು ವಿಶಾಲಗೊಳ್ಳಬೇಕಾಗಿತ್ತು. ಆದರೆ ಜಾಗತೀಕರಣ ಉಳ್ಳವರ ಮಡಿಲಿಗೆ ಬಂದಿದೆ. ಆರ್ಥಿಕವಾಗಿ ಯಾರು ಸಬಲರಾಗಿದ್ದಾರೋ ಅವರು ಜಾಗತೀಕರಣ ಒಪ್ಪಿಕೊಳ್ಳಬಹುದು, ಆದರೆ ಬಡವರಿಗೆ ಅದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಕಾರಣ ಜಾತಿ ನಾಶವಾಗಿ, ಸಮಾನತೆ ತರುವಂಥ ಜಾಗತೀಕರಣವನ್ನು ಮಾತ್ರ ನಾವು ಒಪ್ಪಿಕೊಳ್ಳುತ್ತೇವೆ ಎಂದು ಹೇಳುತ್ತಾರೆ.

ಸಮಕಾಲೀನ ದಲಿತ ಚಳಳಿಯು ತಕ್ಷಣದ ಹೋರಾಟ ಮತ್ತು ದೀರ್ಘಕಾಲೀನ ಹೋರಾಟಗಳನ್ನು ರೂಪಿಸುವಲ್ಲಿ ಸಮತೋಲನ ಕಾಯ್ದುಕೊಳ್ಳುವಲ್ಲಿ ವಿಫಲವಾಗಿದೆ. ಎಪ್ಪತ್ತು ಹಾಗೂ ಎಂಭತ್ತರ ದಶಕಗಳಲ್ಲಿದ್ದ ಸಂವೇದನಾಶೀಲ ತೀವ್ರತೆಗಳು ಇಂದು ದುರ್ಬಲವಾಗಿದೆ. ಪರಿಣಾಮವಾಗಿ ತೊಂಭತ್ತರ ದಶಕದಲ್ಲಿ ನಡೆದ ಕೆಲವು ಚಳವಳಿಗಳಿಂದ ಇದು ಸ್ಪಷ್ಟವಾಗುತ್ತದೆ. ಮಹಿಳಾ ಚಳವಳಿ, ಪರಿಸರ ಚಳವಳಿ, ಜನಾಂಗೀಯ ಚಳವಳಿ, ಜಾತಿವಾದಿ ಚಳವಳಿ ಮುಂತಾದ ಚಳವಳಿಗಳು ವಸ್ತುಸ್ಥಿತಿಯನ್ನು ಶೋಷಿತರ ನೆಲೆಯಿಂದ ಹಾಗೂ ರಾಜಕೀಯ ಆರ್ಥಿಕ ನೆಲೆಯಿಂದ ಗ್ರಹಿಸದಂತೆ ಮಾಡಿದೆ. ಇವತ್ತಿನ ಜಾಗತೀಕರಣ ಪ್ರಕ್ರಿಯೆಯು ಸುತ್ತುವರಿದ ಶೋಷಣೆಯಲ್ಲಿ ತೊಡಗಿವೆ. ದಲಿತ ಸಮುದಾಯಗಳು ಇವತ್ತು ಜಾಗತೀಕರಣದ ಬಾಗಿಲಲ್ಲಿವೆ. ಇಂಗ್ಲಿಷ್ ಶಿಕ್ಷಣದಿಂದ ದಲಿತರು ಜಾತಿಯ ಶಾಪದಿಂದ ಮುಕ್ತರಾಗಲು ಪ್ರಯತ್ನಿಸುತ್ತಿದ್ದಾರೆ. ಏಕೆಂದರೆ ಇಂಗ್ಲೀಷ್ ಕಲಿತ ಯಾವುದೇ ದಲಿತ ಈ ಸಮಾಜವನ್ನು ಗಟ್ಟಿಯಾಗಿ ಮಾತನಾಡಿಸಬಲ್ಲ ಒಂದು ಆತ್ಮಶಕ್ತಿಯನ್ನು ಇಂಗ್ಲೀಷ್ ಶಿಕ್ಷಣದಿಂದ ಪಡೆದುಕೊಂಡಿದ್ದಾನೆ. ಇದರಿಂದಾಗಿ ಈಗ ದಲಿತರ ಸಮಕಾಲೀನ ಸವಾಲುಗಳು ವಿಭಿನ್ನವಾಗಿದೆ. ದಲಿತರಲ್ಲೇ ಹಿಂದುಳಿದ, ಮುಂದುವರಿದ ಅಥವಾ ಪ್ರತಿಷ್ಠಿತ ತಿರಸ್ಕೃತ ಎಂಬ ಭಿನ್ನ ಗುಂಪುಗಳು ಎದುರಾಗುತ್ತಿವೆ. ಮೊದಮೊದಲು ಸವಲತ್ತುಗಳನ್ನು ಪಡೆದ ದಲಿತರು ತಮ್ಮ ಹಿಂದಿನ ಸಾಮಾಜಿಕ ರಚನೆಯ ಕಡೆ ತಿರುಗಿಯೂ ನೋಡದಂತೆ ಅವಿತುಕೊಳ್ಳಲು ಬಯಸುತ್ತಾರೆ. ಮುಂದುವರಿದ ದಲಿತರಿಂದಲೇ ಹಿಂದುಳಿದ ದಲಿತರಿಗೆ ಅನ್ಯಾಯವಾಗುತ್ತಿದೆ ಎಂಬ ಕೂಗು ಕೇಳಿಸುತ್ತಿದೆ. ''ಎಲ್ಲ

ಸವಲತ್ತುಗಳನ್ನು ಕಲಿತ ನಗರ ದಲಿತರೇ ನುಂಗಿ ಹಾಕುತ್ತಿದ್ದು, ಗ್ರಾಮೀಣ ದಲಿತರಿಗೆ ಏನು ಸಿಗುತ್ತಿಲ್ಲವೆಂಬ ಆರೋಪವೂ ಇದೆ. ಉನ್ನತ ಅಧಿಕಾರ, ಸ್ಥಾನಮಾನ ಪಡೆದ ದಲಿತರು ಕೆಳಗಿನ ದಲಿತರನ್ನು ನಿಕೃಷ್ಟವಾಗಿ ಕಾಣುತ್ತಾರೆ. ತಾವೇ ಅಸಮಾನತೆಯನ್ನು ಕಾಯ್ದುಕೊಳ್ಳುತ್ತಾರೆ. ಅಧಿಕಾರಕ್ಕೆ ಏರಿದ ಮೇಲೆ ತನ್ನ ಜಾತಿಯ ಏಣಿಯನ್ನು ಕಾಲಿಂದ ತಳ್ಳಿ ಉಪ್ಪರಿಗೆಯ ಮೇಲೆ ಮೋಜು ಮಾಡುತ್ತಾ ಉಳ್ಳವರ ಹಾಗೂ ಮೇಲ್ಜಾತಿಯವರ ಜೊತೆ ಅಪವಿತ್ರ್ಯಗೊಳ್ಳುತ್ತಾರೆ ಎಂದೆಲ್ಲ ಚರ್ಚೆಗಳು ಈಗ ನಡೆಯುತ್ತಿವೆ.''[೨]

ಬಾಗಲಕೋಟೆ ಜಿಲ್ಲೆಯ ದಲಿತ ಹೋರಾಟಗಾರರಾದ ಅಭಿಷೇಕ್ ಚಕ್ರವರ್ತಿಯವರ ಅಭಿಪ್ರಾಯದಲ್ಲಿ ''ಜಾಗತೀಕರಣ ಮುಖ್ಯವಾಗಿ ದೇಶದ ಅಭಿವೃದ್ಧಿಗೆ ಪೂರಕವಾದ ತಾತ್ಕಾಲಿಕ ವ್ಯವಸ್ಥೆ ಮಾತ್ರ. ಅದರ ಮೂಲ ಸಬಲೀಕರಣ, ಆರ್ಥಿಕತೆ, ಅವಶ್ಯಕತೆಗೆ ಬಾಹುಗಳನ್ನು ಚಾಚುತ್ತಿದೆ. ಉದ್ಯೋಗಕ್ಕೆ ಸಂಬಂಧಿಸಿದಂತೆ ಉದ್ಯೋಗ ಸೃಷ್ಟಿಗೆ ಆದ್ಯತೆ ನೀಡಿ ಅನುಷ್ಠಾನಗೊಳಿಸುವುದು. ಆರ್ಥಿಕತೆ, ಉದ್ಯೋಗ, ಉತ್ಪಾದನೆ ಅಭಿವೃದ್ಧಿಯಾಗುತ್ತಿದ್ದಂತೆ ಭಾವಿಸಿ ಭ್ರಮನಿರಸನದಲ್ಲಿರುವ ಜಾಗತೀಕರಣ ನಮ್ಮ ಸಮಾಜದ ಆರ್ಥಿಕ ಅಸಮಾನತೆಯನ್ನು ಬಂಡೆಗಲ್ಲಿನಂತೆ ಗಟ್ಟಿಗೊಳಿಸುತ್ತಿವೆ. ಒಂದೆಡೆಗೆ ಆರ್ಥಿಕತೆ ವೃದ್ಧಿಸಿಕೊಂಡರೂ ಕೂಲಿಕಾರರು, ಶೋಷಿತರು, ದಲಿತ ಮಹಿಳೆಯರು, ಅಲ್ಪಸಂಖ್ಯಾತರು ಸಮಾಜದ ಕೆಳಸ್ತರದ ಜನರ ದುಃಸ್ಥಿತಿ ಸುಧಾರಿಸಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿನ ಅನಕ್ಷರತೆ, ಉದ್ಯೋಗ, ಲಿಂಗ ತಾರತಮ್ಯ ಇಂದಿಗೂ ಅಸಮಾನತೆಯ ಅಗ್ರ ಪಂಕ್ತಿಯಲ್ಲಿವೆ. ೨೦೦೨ರಲ್ಲಿ ವಿಸ್ತೃತಗೊಳ್ಳುತ್ತಿರುವ ''ಪ್ರಜಾಸತ್ತೆ ಮಾನವ ಅಭಿವೃದ್ಧಿ'' ವರದಿಯಲ್ಲಿ ಬಡತನ ನಿವಾರಿಸಿ, ಜಾತಿ ನಾಶಗೊಳಿಸುವ ಅಭಿವೃದ್ಧಿ ಸಾಧಿಸಿಕೊಳ್ಳಲಿಕ್ಕೆ ಆರ್ಥಿಕ ಆಸ್ಪದದ ತಿಳುವಳಿಕೆ ಎಷ್ಟು ಮುಖ್ಯವೋ, ಅಷ್ಟೇ ಸಾಮಾಜಿಕ ದುರಂತವಾಗಿರುವ ಜಾತಿ ವಿನಾಶವು ಮುಖ್ಯವಾಗಿ ಕಾಣುತ್ತದೆ.'' (ಸಂದರ್ಶನ ಅಭಿಷೇಕ ಚಕ್ರವರ್ತಿ, ೨೦೦೯)

ಜಾಗತೀಕರಣದ ಸಂದರ್ಭದಲ್ಲಿ ಜಾತಿ ವಿನಾಶದ ಬಗ್ಗೆ ಮಾತನಾಡಿದ ಅಭಿಷೇಕ ಚಕ್ರವರ್ತಿಯವರ ಅಭಿಪ್ರಾಯದಂತೆ ಜಾತಿ ಪದ್ಧತಿ ಇಂದು ಇನ್ನಷ್ಟು ಬಲಿಷ್ಠವಾಗುತ್ತಿದೆ. ದಲಿತರ ಮೇಲಿನ ದೌರ್ಜನ್ಯಗಳು ಹೆಚ್ಚುತ್ತಿವೆ. ಕೆಳವರ್ಗದವರ ಸ್ಥಿತಿಗತಿಗಳು ಬದಲಾಗಿಲ್ಲ. ಬಡತನ, ಹಸಿವು, ದಾರಿದ್ರ್ಯ ಇನ್ನಷ್ಟು ಹೆಚ್ಚುತ್ತಿದೆಯೇ ಹೊರತು ಕಡಿಮೆಯಾಗಿಲ್ಲ. ಹೀಗಿರುವಾಗ ಜಾಗತೀಕರಣ ಬಡವರ ಪಾಲಿಗೆ ಬಂದಿಲ್ಲ ಎಂದು ಹೇಳುತ್ತಾರೆ. ಸರಕಾರ ಕೆಳವರ್ಗದವರ ಆರ್ಥಿಕ ಅಭಿವೃದ್ಧಿ ಮಾಡಲು ಅನೇಕ ಯೋಜನೆಗಳನ್ನು ಹಾಕಿಕೊಂಡರೂ ಅವುಗಳು ಜಾರಿಗೊಳ್ಳುವಲ್ಲಿ ಸೋತಿವೆ. ಹೀಗಾಗಿ ಬಡತನ, ನಿರುದ್ಯೋಗ ಹೆಚ್ಚಾಗಿ ಶ್ರೀಮಂತ-ಬಡವರ ನಡುವೆ ಅಂತರ ಜಾಸ್ತಿ ಆಗುತ್ತಿದೆ. ಇದರಿಂದಾಗಿ ಜಾತಿ ವಿನಾಶ ಹೇಗೆ ಸಾಧ್ಯ ಎಂದು ಪ್ರಶ್ನಿಸಿಕೊಳ್ಳುವಂತಾಗಿದೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಜಾಗತೀಕರಣದ ಪ್ರಭಾವದಿಂದಾಗಿ ಎಲ್ಲವು ಖಾಸಗೀಕರಣಗೊಳುತ್ತಿದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಮೀಸಲಾತಿಯ ಪ್ರಶ್ನೆ ದಲಿತರಿಗೆ ಕಾಡುವುದು ಸಹಜವೆ. ಆದರೆ ಒಟ್ಟು ನಮ್ಮ ಆರ್ಥಿಕ ವ್ಯವಸ್ಥೆ

ಬೆಳೆದಿರುವುದೇ ವಿದೇಶಿ ಮೂಲ ಚಿಂತನೆಗಳಿಂದ. ವಸಾಹತುಶಾಹಿ ರೂಪಿಸಿರುವ ಆರ್ಥಿಕ ಕ್ರಮಗಳ ತಳಪಾಯದಲ್ಲೇ ಖಾಸಗೀಕರಣವನ್ನು ಭದ್ರಗೊಳಿಸಲಾಗಿದೆ.''[೩] ಇವತ್ತಿನ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ, ಆರ್ಥಿಕ ತಂತ್ರಜ್ಞಾನದಲ್ಲಿ ಕೆಳವರ್ಗದ ಜನ ಸ್ವತಂತ್ರವಾಗಿ ಆರ್ಥಿಕ ಸಬಲತೆ ಕಂಡುಕೊಳ್ಳುವುದು ಸಾಧ್ಯವೇ ಇಲ್ಲ. ಖಾಸಗೀಕರಣ ವಿರೋಧಿಸುವಲ್ಲಿ ಅದನ್ನು ಕೆಳಜಾತಿಗಳ ಕಲ್ಯಾಣಕ್ಕೆ ಅನುರೂಪವಾಗಿ ಮಾರ್ಪಡಿಸಿ, ಅಂತರಾಷ್ಟ್ರೀಯ ಬಂಡವಾಳವನ್ನು ಸಾಮಾಜಿಕ ನ್ಯಾಯದ ಆಕರಗಳಲ್ಲಿ ಅಳವಡಿಸಿಕೊಳ್ಳುವ, ಕ್ರಮದ ಬಗ್ಗೆ ನಮ್ಮೆಲ್ಲರ ಕಾಳಜಿ ಹಾಗೂ ಹೋರಾಟಗಳು ಮುಂದಾದರೆ ಮಾತ್ರ ಕೆಳಜಾತಿಗಳ ಏಳಿಗೆಗೆ ಇನ್ನೊಂದು ಜಾಗತಿಕ ಆಯಾಮ ಸಾಧ್ಯವಾಗುತ್ತದೆ.

ಎಪ್ಪತ್ತರ ದಶಕದ ದಲಿತ ಚಳವಳಿ ಉನ್ನತ ಮಟ್ಟದಲ್ಲಿತ್ತು. ನಂತರದ ಕಾಲದಲ್ಲಿ ಅದು ಕೆಲವು ಮೂಲಭೂತ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳದೆ ಕುಗ್ಗುತ್ತಾ ಹೋಯಿತು. ''ಶೋಷಣೆಯ ಸ್ವರೂಪಗಳೇನು, ಶೋಷಣೆಯ ಸಂಬಂಧದ ವಿನ್ಯಾಸಗಳೇನು ಮತ್ತು ಪರ್ಯಾಯಗಳೇನು ಎಂಬ ವಿಚಾರಗಳನ್ನು ದಲಿತ ಚಳವಳಿ ಬಗೆಹರಿಸಿಕೊಂಡಿಲ್ಲ. ಆರಂಭಿಕ ಹಂತದಲ್ಲಿ ಹಳ್ಳಿಗಳ ಮಟ್ಟದಲ್ಲಿ, ಕಾರ್ಯಕರ್ತರ ಮಟ್ಟದಲ್ಲಿ, ಭಾವನಾತ್ಮಕವೂ, ಸಂವೇದನಾಶೀಲವೂ ಆದ ಹೋರಾಟದ ಸೆಲೆಗಳನ್ನು ದಲಿತ ಚಳವಳಿ ಹುಟ್ಟುಹಾಕಿದ್ದು ನಿಜ.''[೪] ಅನಂತರದಲ್ಲಿ ಕಾರ್ಯಕರ್ತರನ್ನು ಸೈದ್ಧಾಂತಿಕವಾಗಿ ಮತ್ತು ಆಚರಣಾತ್ಮವಾಗಿ ಅಭಿವೃದ್ಧಿ ಪಡಿಸುತ್ತಾ, ಅವರಲ್ಲಿ ಸಂಘಟನಾತ್ಮಕ ಬದ್ಧತೆಯನ್ನು ಬಲಪಡಿಸುತ್ತಾ ಸಾಗಬೇಕಿತ್ತು. ಆದರೆ ದಲಿತ ಚಳವಳಿಯ ಒಳಗೆ ಇದು ನಡೆಯಲೇ ಇಲ್ಲ. ಪರಿಣಾಮವಾಗಿ ಇತ್ತೀಚೆಗೆ ದಲಿತ ಸಂಘಟನೆ ಹಲವಾರು ಹೋಳುಗಳಾಗಿ ಒಡೆದು ಹೋಗಿದೆ.

**ದಲಿತ ಚಳವಳಿಯಲ್ಲಿ ಮಹಿಳೆ:** ''ಆರಂಭಿಕ ಹಂತದಲ್ಲಿ ದಲಿತ ಚಳವಳಿಯಲ್ಲಿದ್ದ ಉತ್ಸಾಹಗಳು, ಒಲವುಗಳು, ಬದ್ಧತೆಗಳು ಇಂದು ರೋಮಾಂಚನವನ್ನುಂಟುಮಾಡುತ್ತವೆ. ಅಂದಿನ ಆ ಸ್ಥಿತಿ ಇಂದು ಚಳವಳಿಯಲಿಲ್ಲ. ಚಾರಿತ್ರಿಕ ಬೆಳವಣಿಗೆಯ ಏರುಪೇರುಗಳನ್ನು ಗಂಭೀರವಾಗಿ ಗಮನದಲ್ಲಿಟ್ಟುಕೊಂಡು ದಲಿತ ಚಳವಳಿಯ ಹಿನ್ನಡೆಯನ್ನು ಉಳಿದೆಲ್ಲಾ ಚಳವಳಿಗಳ ಸಾಮಾನ್ಯವಾದ ತಾತ್ಕಾಲಿಕ''[೫] ಹಿನ್ನೆಡೆಯ ಕಾಲದಲ್ಲಿ ದಲಿತ ಚಳವಳಿ ದಿಕ್ಕಾಪಾಲಾಗಿರುವ ಸಂದರ್ಭದಲ್ಲಿ, ಮಹಿಳಾ ಚಳವಳಿ ದಲಿತ ಮಹಿಳೆಯರ ಬಗ್ಗೆ ಮಾತನಾಡದಿರುವ ಸನ್ನಿವೇಶವನ್ನು ಆಲೋಚಿಸಬೇಕಾಗಿದೆ. ಯಾವುದೇ ಚಳವಳಿಯಾಗಿರಬಹುದು ರೈತ ಚಳವಳಿ, ಕಾರ್ಮಿಕ ಚಳವಳಿ, ಬಂಡಾಯ ಚಳವಳಿಗಳಲ್ಲಿ ಪ್ರತ್ಯೇಕವಾದ ಮಹಿಳಾ ಸಂಘಟನೆಗಳಿಲ್ಲ ಮತ್ತು ಮಹಿಳಾ ಸಮಸ್ಯೆಯನ್ನು ಪ್ರತ್ಯೇಕವಾಗಿ ಪರಿಗಣಿಸಿಲ್ಲ. ದಲಿತ ಚಳವಳಿಯಲ್ಲಿ ಸಹ ಮಹಿಳೆಯರಿಲ್ಲ. ಕರ್ನಾಟಕದಲ್ಲಿರುವ ಯಾವುದೇ ಚಳವಳಿಯಲ್ಲಿ ಮಹಿಳಾ ಸಮಸ್ಯೆಯನ್ನು ಪರಿಗಣಿಸಿಲ್ಲ ಎಂಬುದನ್ನು ಗಮನಿಸಬಹುದು. ಆದರೆ ನಕ್ಸಲ್ ಚಳವಳಿಯಲ್ಲಿ ಮಹಿಳೆಯರ ಪಾತ್ರ ಪುರುಷರಷ್ಟೇ ಮುಖ್ಯವಾಗಿದೆ. ಚಳವಳಿಯ ಎಲ್ಲಾ ಆಯಾಮಗಳಲ್ಲಿ ಆಕೆಯ ಪಾತ್ರವನ್ನು ಕಾಣಬಹುದು. ''ಸಿದ್ಧಾಂತ, ಆಚರಣೆ ಮತ್ತು

ರಚನಾತ್ಮಕತೆಯಲ್ಲಿ ನಕ್ಸಲೀಯ ಚಳವಳಿ ಉಳಿದೆಲ್ಲ ಪ್ರಗತಿಪರ ಚಳವಳಿಗಳಿಗಿಂತ ಮುಂದಿದೆ.''[೬] ನಕ್ಸಲ್ ಚಳವಳಿಯಲ್ಲಿ ಇರುವ ಹಾಗೆ ಬೇರೆ ಯಾವುದೇ ಪ್ರಗತಿಪರ ಚಳವಳಿಯಲ್ಲಿ ಬೇರೆ ಬೇರೆ ವಿಭಾಗಗಳಿಲ್ಲ. ಯಾವ ಚಳವಳಿಯಲ್ಲಿ ಮಹಿಳೆ ಇಲ್ಲವೋ ಆ ಚಳವಳಿ ಪ್ರಬುದ್ಧಾವಸ್ಥೆ ತಲುಪುವುದಿಲ್ಲ ಎಂದರೆ ತಪ್ಪಾಗಲಾರದು.

ದಲಿತ ಚಳವಳಿಯಲ್ಲಿ ಮಹಿಳೆಯರ ಪಾತ್ರ ಬಹಳ ಪರಿಣಾಮಕಾರಿಯಾಗಿಲ್ಲ. ಆದರೆ ಆರಂಭದಿಂದ ಇಲ್ಲಿಯವರೆಗೆ ಗಮನಿಸಿದರೆ ಸಂಪೂರ್ಣವಾಗಿ ಮಹಿಳೆ ದಲಿತ ಸಂಘಟನೆಯಲ್ಲಿ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಬೇರೆ ಬೇರೆ ಹಂತದಲ್ಲಿ ಮಹಿಳೆ ಪಾತ್ರ ಇತ್ತು ಎಂಬುದು ಸ್ಪಷ್ಟ. ದಲಿತ ಮಹಿಳೆಯ ಮೇಲೆ ಅತ್ಯಾಚಾರ, ಕೊಲೆ, ಬಹಿಷ್ಕಾರ ನಡೆದಾಗ ಅದನ್ನು ವಿರೋಧಿಸಿ, ಪ್ರತಿಭಟನೆ, ಮೆರವಣಿಗೆ, ಧರಣಿ, ಸತ್ಯಾಗ್ರಹ, ಸಮಾವೇಶ ನಡೆಯುವಾಗ ಮಹಿಳೆಯರು ಭಾಗವಹಿಸಿದ್ದಾರೆ. ದಲಿತ ಸಂಘರ್ಷ ಸಮಿತಿಯ ಒಂದು ಭಾಗವಾದ ದಲಿತ ಮಹಿಳಾ ಒಕ್ಕೂಟ ಸಂಘಟನೆ ಇದ್ದರೂ ಅದು ಬಲಿಷ್ಠವಾಗಿಲ್ಲ. ಸಮರ್ಥ ಮಹಿಳಾ ದಲಿತ ನಾಯಕರನ್ನು ಹೊಂದದೆ ಇರುವುದೇ ಇದಕ್ಕೆ ಕಾರಣ. ದಲಿತ ಮಹಿಳೆಯರನ್ನು ಹೆಚ್ಚು ಹೆಚ್ಚಾಗಿ ಸಂಘಟನೆಯಡಿ ಸೆಳೆಯುವಲ್ಲಿ ವಿಫಲವಾಗಿದೆ. ಜಿಲ್ಲೆ, ತಾಲ್ಲೂಕು ಮಟ್ಟದಲ್ಲಿ ತನ್ನ ಶಾಖೆಗಳನ್ನು ತೆರೆದರೂ ಮಹಿಳಾ ಸದಸ್ಯತ್ವ ಪಡೆಯುವಲ್ಲಿ ಸೋತಿದೆ ಎಂದರೆ ತಪ್ಪಾಗಲಾರದು. ಏಕೆಂದರೆ ಮಹಿಳೆಯರಿಗೆ ಹೆಚ್ಚು ಅನ್ಯಾಯವಾಗುವುದು ಗ್ರಾಮೀಣ ಪ್ರದೇಶದಲ್ಲಿಯೇ. ಗ್ರಾಮದ ರಾಜಕೀಯ, ಆರ್ಥಿಕ, ಸಾಮಾಜಿಕ ಪರಿಸ್ಥಿತಿಯ ಹಿಡಿತ ಜಮೀನ್ದಾರರ ಕೈಯಲ್ಲಿಯೇ ಇರುತ್ತದೆ.[*] ಇಂಥ ಸಾಮಾಜಿಕ ವ್ಯವಸ್ಥೆಯಲ್ಲಿ ದುಡಿಯುವ ವರ್ಗದವರು ಜಮೀನ್ದಾರರನ್ನೇ ಅವಲಂಭಿಸಿರುತ್ತಾರೆ. ಆದ್ದರಿಂದಲೇ ಏನೋ ಜಮೀನ್ದಾರರು ತಮ್ಮ ಲಾಭಕ್ಕಾಗಿ ಮತ್ತು ಶೋಷಣೆಯ ಕಾರಣಕ್ಕಾಗಿ ದುಡಿಯುವ ಜನರನ್ನು ಅವಲಂಭಿಸಿರುತ್ತಾರೆ. ಹಳ್ಳಿಗಳಲ್ಲಿ ಜಮೀನ್ದಾರರೇ ಎಲ್ಲಾ ನ್ಯಾಯ ಹೇಳುವುದು ಶಿಕ್ಷೆ ವಿಧಿಸುವುದು ಅವರೇ, ಮತ್ತು ದಲಿತರ ಮೇಲೆ ದೌರ್ಜನ್ಯ ನಡೆಸುವವರೂ ಅವರೇ. ಇಂತಹ ಪರಿಸ್ಥಿತಿಯಲ್ಲಿ ದಲಿತರು ಹಾಗೂ ದಲಿತ ಮಹಿಳೆಯರು ನಲುಗಿ ಹೋಗಿದ್ದಾರೆ. ಹಳ್ಳಿಗಳಲ್ಲಿರುವ ಜಮೀನ್ದಾರಿ, ಬಂಡವಾಳಶಾಹಿಗಳ ಕ್ರೌರ್ಯವನ್ನು ದಲಿತ ಚಳವಳಿ ಎದುರಿಸಲು ಆಗುತ್ತಿಲ್ಲ ಬಿಡಲೂ ಆಗುತ್ತಿಲ್ಲ.[೬]

ಹಳ್ಳಿಯ ದಲಿತ ವರ್ಗ ದಲಿತ ಚಳವಳಿಯಲ್ಲಿ ಭಾಗವಹಿಸಲು ಹಿಂದೆ ಮುಂದೆ ನೋಡುತ್ತಾರೆ. ಏಕೆಂದರೆ ಅವರು ಚಳವಳಿಯಲ್ಲಿ ಭಾಗವಹಿಸುವುದೆಂದರೆ ಜಮೀನ್ದಾರಿ ವರ್ಗದ ವಿರುದ್ಧ ಹೋರಾಟಕ್ಕಿಳಿದಂತೆಯೇ. ದಲಿತ ಚಳವಳಿಯ ಹೋರಾಟ ಇರುವುದೇ ಜಮೀನ್ದಾರರ, ಬಂಡವಾಳಶಾಹಿಗಳ, ಶ್ರೀಮಂತರ ವಿರುದ್ಧ ಹೀಗಾಗಿ ಚಳವಳಿಯಲ್ಲಿ ಭಾಗವಹಿಸಲು ಹಿಂಜರಿಯುತ್ತಾರೆ. ಜಮೀನ್ದಾರರಿಂದ ಶೋಷಣೆಗೆ ಒಳಗಾಗುವವರು ಪುರುಷರಿಗಿಂತ ಹೆಚ್ಚಾಗಿ ಮಹಿಳೆಯರೇ. ಕೂಲಿಗಾಗಿ ಜಮೀನ್ದಾರರ ಹೊಲದಲ್ಲಿ, ಮನೆಯಲ್ಲಿ ಅವಳು ಸದಾ ಕೆಲಸ ಮಾಡಬೇಕಾಗಿರುವುದರಿಂದ ಅವಳು ಶೋಷಣೆಗೆ ಒಳಗಾಗುತ್ತಾಳೆ, ಜಮೀನ್ದಾರರ ಮನೆಗಳಲ್ಲಿ ಕೂಲಿ,

ಜೀತ ಮುಂತಾದವುಗಳ ಮೇಲೆಯೇ ಎಷ್ಟೆಷ್ಟು ಅವಲಂಬನೆ ಇರುತ್ತದೋ ಅಷ್ಟಷ್ಟು ಚಳವಳಿ ಹುಟ್ಟಲು ಕಾವು ಇರುತ್ತದೆ ನಿಜ. ಆದರೆ ಈ ಪರಿಸ್ಥಿತಿಯ ಪಕ್ವತೆಯನ್ನು ಮಹಿಳೆಯರು ಪಡೆಯುವಲ್ಲಿ ವಿಫಲರಾಗಿದ್ದಾರೆ ಅಥವಾ ಮಹಿಳೆಯರು ವಿಫಲರಾಗಲು ಸಂಘಟನೆ ಕಾರಣವಾಗಿದೆ.

**ಖಾಸಗೀಕರಣ ಮತ್ತು ದಲಿತರು:** ವಾಸ್ತವದಲ್ಲಿ ಬಂಡವಾಳಶಾಹಿಗಳ ವಿರುದ್ಧ ಹೋರಾಡುವಲ್ಲಿ ವಿಫಲವಾಗಿದ್ದರು ಇವತ್ತಿನ ಎಲ್ಲಾ ಕ್ಷೇತ್ರಗಳಲ್ಲೂ ದಲಿತರು ಪ್ರವೇಶಿಸುತ್ತಾ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸುತ್ತಿದ್ದಾರೆ. ನಿರಂತರವಾದ ಅವಮಾನಗಳು ದೌರ್ಜನ್ಯಗಳು ಅವರನ್ನು ಭಾರತೀಯ ಸಮಾಜದ ವ್ಯವಸ್ಥೆಯ ವಿರುದ್ಧ ಹೋರಾಡುವಂತೆ ಮಾಡಿವೆ. ದಲಿತರು ಇಂದು ತಮ್ಮ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಮೌನವಾಗಿ ಸಹಿಸಿಕೊಳ್ಳುತ್ತಿಲ್ಲ. ತಮ್ಮ ಹಕ್ಕು, ಅಧಿಕಾರಕ್ಕಾಗಿ ಹೋರಾಟ ನಡೆಸುತ್ತಿದ್ದಾರೆ. ಸಂವಿಧಾನ ಬದ್ಧವಾದ ಕಾನೂನುಗಳನ್ನು ಉಪಯೋಗಿಸಿಕೊಂಡು ಪ್ರಜ್ಞಾಪೂರ್ವಕವಾಗಿ ದೌರ್ಜನ್ಯಗಳನ್ನು ಪ್ರತಿಭಟಿಸುತ್ತಿದ್ದಾರೆ.

ಸ್ವಾತಂತ್ರ್ಯನಂತರ ದಲಿತರಲ್ಲಿಉಂಟಾದ ಜಾಗೃತಿ, ಉತ್ತಮಗೊಂಡ ಸಾಕ್ಷರತೆ ಪ್ರಮಾಣ, ಸಂಘಟನೆ, ಶಿಕ್ಷಣ ಮುಂತಾದ ಸಂಗತಿಗಳಿಂದಾಗಿ ದಲಿತರ ಪ್ರತಿಭಟಿಸುವ ಸಾಮರ್ಥ್ಯ ಉತ್ತಮಗೊಂಡಿದೆ. ಹಳ್ಳಿ ಹಳ್ಳಿಗಳಲ್ಲೂ ದಲಿತರ ಪ್ರತಿಭಟನೆಗಳು ಅನೇಕ ರೂಪದಲ್ಲಿ ವ್ಯಕ್ತವಾಗುತ್ತಿದೆ. ನಾವು ದೌರ್ಜನ್ಯಕ್ಕೆ ಒಳಗಾಗಿದ್ದೇವೆ, ಅದನ್ನು ಪ್ರತಿಭಟಿಸಬೇಕು ಎಂಬ ಜಾಗೃತಿ ದಲಿತರಲ್ಲಿ ಉಂಟಾದ ಕಾರಣ ಉನ್ನತ ವರ್ಗದವರನ್ನು ಪ್ರಶ್ನಿಸುವ ಧೈರ್ಯ ಬಂದಿದೆ. ಇದರಿಂದಾಗಿ ಸೂಕ್ಷ್ಮ ಮತ್ತು ಒಳಸಂಚಿನ ದೌರ್ಜನ್ಯಗಳು ದಲಿತರ ಮೇಲೆ ಆಗುತ್ತಿವೆ.

ಇಂಥ ಅನೇಕ ಘಟನೆಗಳ ವಿರುದ್ಧ ದಲಿತ ಚಳವಳಿ ದನಿ ಎತ್ತಿದೆ. ಈ ಸಮಾಜವನ್ನು ಬದಲಾಯಿಸುವ ದೃಷ್ಟಿಯಿಂದ ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ವಿಚಾರಧಾರೆಗಳ ಅಧ್ಯಯನ ಮಾಡಿ ದಲಿತ ಚಳವಳಿಗೆ ಹೊಸ ಆಲೋಚನೆ, ಆಯಾಮ ದೊರಕಿಸಿಕೊಂಡಿತು. ದಲಿತ ಚಳವಳಿಯ ಸೈದ್ಧಾಂತಿಕ ನೆಲೆ ಯಾವುದೆಂದರೆ ಅಂಬೇಡ್ಕರ್ ಮತ್ತು ಮಾರ್ಕ್ಸ್‌ರ ಚಿಂತನಾ ಕ್ರಮವಾಗಿದೆ. ಇದನ್ನು ಭಾರತೀಯಗೊಳಿಸಿ, ಆ ನೆಲೆಯಲ್ಲಿ ಹೋರಾಟವನ್ನು ರೂಪಿಸಿ ಮುನ್ನುಗ್ಗುತ್ತಿರುವ ದಲಿತ ಚಳವಳಿ ಯಶಸ್ಸು ಸಾಧಿಸುವ ದಿಕ್ಕಿನಲ್ಲಿ ಮುನ್ನಡೆಯುತ್ತಿದೆ ಎನ್ನಬಹುದು.

ಸ್ವಾತಂತ್ರ್ಯ ಪೂರ್ವದಿಂದಲೂ ಎಡಪಂಥೀಯರು ನಡೆಸುತ್ತಿರುವ ಹೋರಾಟಕ್ಕೆ ಜಾತಿ ಮೂಲ ಭಾರತದ ನೆಲೆಗಳನ್ನು ಕಂಡುಕೊಳ್ಳಲು ವಿಫಲವಾದ್ದರಿಂದ ದಲಿತ ಚಳವಳಿಗಳು ವರ್ಗ ನೆಲೆಯಿಂದ ಬೆಳೆಯುವುದು ಸಾಧ್ಯವಾಯಿತು. ಇಂದಿಗೂ ದಲಿತ ಚಳವಳಿಗಳ ದೊಡ್ಡ ಸವಾಲೆಂದರೆ ಗ್ರಾಮೀಣ ಪ್ರದೇಶದ ಭೂ ಸಂಬಂಧಿತ ವಿವಾದಗಳನ್ನು ಬಗೆಹರಿಸುವುದು. ಭೂಮಿಗಾಗಿ ನಡೆಸಿದ ಹೋರಾಟಗಳೇ ಹೆಚ್ಚು ಸಂಘರ್ಷಕ್ಕೆ

ಕಾರಣವಾಗಿದೆ. ದಲಿತ ಹಕ್ಕುಗಳ ರಕ್ಷಣೆಗಾಗಿ ಅನೇಕ ಕಾನೂನುಗಳಿವೆಯಾದರೂ ಅವುಗಳಿಂದ ದಲಿತರು ವಂಚಿತರಾಗುತ್ತ ಬಂದಿದ್ದಾರೆ. ಈ ದೇಶದ ಕೃಷಿ ಕಾರ್ಮಿಕರಲ್ಲಿ ಅತಿ ಹೆಚ್ಚು ಜನ, ಅಂದರೆ ಶೇ.೪೯ರಷ್ಟು ಖಾಸಗೀಕರಣ, ಉದಾರೀಕರಣಗಳಿಂದಾಗಿ ತೊಂಭತ್ತರ ದಶಕದ ಆರಂಭದಲ್ಲಿ ಇನ್ನಷ್ಟು ಜನ ದಲಿತರು ಭೂಮಿಯನ್ನು ಕಳೆದುಕೊಂಡು ಬೀದಿ ಪಾಲಾದರು.[೮] ಬಂಡವಾಳಶಾಹಿ ಬೆಳೆಯುತ್ತ ಹೋದಂತೆ ನಗರೀಕರಣ ಹೆಚ್ಚಾಯಿತು ಮತ್ತು ಕೈಗಾರೀಕರಣದಿಂದ ಕೃಷಿಕರು, ದಲಿತ ಕೃಷಿಕರು ಭೂಮಿ ಕಳೆದುಕೊಂಡು ನಗರಗಳಿಗೆ ವಲಸೆ ಬಂದು ಕೊಳಗೇರಿಗಳಲ್ಲಿ ನೆಲೆಸಿದರು. ನಗರೀಕರಣ ಮತ್ತು ಕೈಗಾರಿಕೆಗಳ ಬೃಹತ್ ಬೆಳವಣಿಗೆಯಿಂದ ಅಸ್ಪೃಶ್ಯತೆ ತನ್ನ ತೀವ್ರತೆಯನ್ನು ಕಳೆದುಕೊಂಡರು. ಅಸ್ಪೃಶ್ಯತೆ ನಗರಗಳಲ್ಲಿ ಆಧುನಿಕ ಮಾರ್ಗಗಳಿಂದ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಗ್ರಾಮೀಣ ಪ್ರದೇಶದಲ್ಲಿ ತನ್ನ ಮೂಲ ಸ್ವರೂಪವನ್ನು ಬಿಡದೆ ಅಸ್ಪೃಶ್ಯತೆ, ಅನಕ್ಷರತೆ, ಗುಲಾಮಗಿರಿ ಪದ್ಧತಿ ಗ್ರಾಮಭಾರತದಿಂದ ಮಾಯವಾಗಿಲ್ಲ. ಹಾಗಾಗಿ ಜಮೀನ್ದಾರಿ ಪದ್ಧತಿ ಮತ್ತು ಕೃಷಿ ಕಾರ್ಮಿಕರ ನಡುವಿನ ಘರ್ಷಣೆಗಳು ಇಂದಿಗೂ ಮುಂದುವರಿದಿವೆ.

### ೪.೧ ದಲಿತ ಸಂಘರ್ಷ ಸಮಿತಿಯಲ್ಲಿ ದ್ವಂದ್ವ

ದಲಿತ ಚಳವಳಿಯ ಪಯಣದ ಗುರುತು ಹೆಚ್ಚುಗಾರಿಕೆಯದು. ಈ ಚಳವಳಿ ಶೋಷಕರ ನಿದ್ದೆಗೆಡಿಸಿ ಶೋಷಿತರಲ್ಲಿ ಎಚ್ಚರ ತಂದಿತು. ಆಡಳಿತ ಮತ್ತು ಪ್ರಭುತ್ವದ ಎದೆಯೊಳಗೆ ಬೆರೆಯದೇ ಕಣ್ಣೋಟ ಉಂಟಾಗಲು ಈ ಚಳವಳಿ ಕಾರಣವಾಯಿತು. ಹೀಗೆ ನೈತಿಕಗೊಂಡವರು ನಮ್ಮೊಡನಿದ್ದಾರೆ. ಆದರೆ ಅವರ ಇವತ್ತಿನ ಮೌನ ಸೋಜಿಗವೆನಿಸಿದೆ. ಅಂದು ದಲಿತ ಚಳವಳಿ ಆಕರ್ಷಣೆ ಮಾಡಿದ ರೀತಿ ಅದ್ಭುತ. ಎಪ್ಪತ್ತರ ದಶಕದಲ್ಲಿ ದಲಿತ ಚಳವಳಿ ನಾಯಕರ ಭಾಷಣ, ಧೈರ್ಯ, ಕೆಚ್ಚಿನ ಮಾತುಗಳು ದಲಿತ ಯುವಕರನ್ನು ರೋಚಕಗೊಳಿಸುತ್ತಿದ್ದವು. ದಲಿತರ ಮೇಲಿನ ದೌರ್ಜನ್ಯ ವಿರೋಧಿಸಿ ತಮ್ಮ ಹಕ್ಕುಗಳಿಗಾಗಿ ತೀವ್ರತರದ ಹೋರಾಟ ಮಾಡಿ ಮೇಲ್ವರ್ಗದವರ ಎದೆಯಲ್ಲಿ ನಡುಕ ಹುಟ್ಟಿಸಿತು. ಎಂಭತ್ತರ ದಶಕದ ದಿನಗಳಲ್ಲಿ ದಲಿತ ಸಂಘಟನೆ ರಾಜಕೀಯ ಪ್ರವೇಶಿಸುವುದರೊಡನೆ ತನ್ನ ಉತ್ತುಂಗದ ಸ್ಥಿತಿಯನ್ನು ಕಳೆದುಕೊಂಡಿತು. ಇದನ್ನು ಗಮನದಲ್ಲಿಟ್ಟುಕೊಂಡು ದ್ರಾವಿಡ ಚಳವಳಿಯ ನಾಯಕ ಪೆರಿಯಾರ್ ರಾಮಸ್ವಾಮಿಯವರ ಒಂದು ವಿವೇಕದ ಮಾತು ಹೀಗಿದೆ.

> ''ಹಾರುವವನಿಗೆ ಮಿತಿಮೀರಿದ ಹುಚ್ಚು ಹಿಡಿದಾಗಲೂ ತನ್ನ ಜಾತಿಯೊಳಗಿನ ಒಳಗುಟ್ಟಿನ ಒಂದಂಶವನ್ನು ಹೊರಬಿಡಲಾರ. ಆದರೆ ನಮ್ಮವರಿಗೆ ಹುಚ್ಚು ಹಿಡಿಯಬೇಕಿಲ್ಲ. ಕೇವಲ ತಾವು ತಿಂದಿರುವ ಖಾರ ಹೆಚ್ಚಾಗಿ ಸಿಟ್ಟು ನೆತ್ತಿಗೇರಿದರೆ ಸಾಕು. ಕೆಲವೇ ನಿಮಿಷಗಳಲ್ಲಿ, ಮನೆಯೊಳಗಿನ ಗುಟ್ಟನ್ನೆಲ್ಲಾ ಬೀದಿಗೆ ಚೆಲ್ಲಿಬಿಡುತ್ತಾರೆ.''[೯]

ಅಂದರೆ ಆಂತರಿಕವಾಗಿ ಸರಿಪಡಿಸಿಕೊಳ್ಳಬೇಕಾದ ವಿಷಯಗಳನ್ನೆಲ್ಲಾ ಬೀದಿ ವಿಚಾರವನ್ನಾಗಿಸಿ ಸಂಘಟನೆಯ ಗುಟ್ಟನ್ನು ರಟ್ಟು ಮಾಡುತ್ತಿರುವುದು ಸರಿಯಲ್ಲ ಎಂಬುದು ಅವರ ಅಭಿಪ್ರಾಯವಾಗಿದೆ. ಸಾಮಾಜಿಕ ಬದಲಾವಣೆಯೇ ತಮ್ಮ ಜೀವನದ ಗುರಿ ಎಂಬ ಮಹತ್ತರ ಉದ್ದೇಶವುಳ್ಳ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ನಾಯಕರು ಈ ರೋಗದಿಂದ ಮುಕ್ತರಾಗಿಲ್ಲ. ತೊಂಭತ್ತರ ದಶಕದಲ್ಲಿ ದಲಿತ ಸಂಘರ್ಷ ಸಮಿತಿಯಲ್ಲಿ ಆದ ಬಿರುಕುಗಳು ಪತ್ರಿಕೆಯಲ್ಲಿ ಸುದ್ದಿಯಾಗಿ ದಲಿತ ಸಂಘಟನೆಯ ಬಿರುಕು, ನಾಯಕರ ಮೈಮನಸ್ಸುಗಳ ವಿಚಾರಗಳನ್ನು ತಿಳಿದ ಮೇಲ್ವರ್ಗದವರು ತಮ್ಮ ಬೇಳೆ ಬೇಯಿಸಿಕೊಳ್ಳುವ ದಾರಿ ಸುಲಭ ಮಾಡಿಕೊಟ್ಟಿದ್ದು ನಮ್ಮ ದಲಿತ ನಾಯಕರೆಂದರೆ ತಪ್ಪಾಗಲಾರದು. ಕರ್ನಾಟಕ ದಲಿತ ಸಂಘರ್ಷ ಸಮಿತಿಯಲ್ಲಿನ ಬಿರುಕಿನಿಂದಾಗಿ ತೊಂಭತ್ತರ ಮಧ್ಯದ ದಶಕದಲ್ಲಿ ಹಲವಾರು ಬಣಗಳಾಗಿ ವಿಂಗಡನೆಯಾದವು ಅವುಗಳೆಂದರೆ.

೧. ಕರ್ನಾಟಕ ದಲಿತ ಸಂಘರ್ಷ ಸಮಿತಿ (ಬಿ.ಕೃಷ್ಣಪ್ಪ ನೇತೃತ್ವ)

೨. ದಲಿತ ಸಂಘರ್ಷ ಸಮಿತಿ (ಭೀಮವಾದ)

೩. ದಲಿತ ಸಂಘರ್ಷ ಸಮಿತಿ (ಸಾಗರ ಬಣ)

೪. ದಲಿತ ಸಂಘರ್ಷ ಸಮಿತಿ (ಮೂರ್ತಿ ಬಣ)

೫. ಮಾದಿಗ ಮೀಸಲಾತಿ ಹೋರಾಟ ಸಮಿತಿ

೬. ಬಂಡಾಯ ಸಾಹಿತ್ಯ ಸಂಘಟನೆ

೭. ದಲಿತ ಮತ್ತು ಪ್ರಗತಿಪರ ಚಿಂತನಾ ವೇದಿಕೆ

೮. ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ ಇಪ್ಟ್

೯. ದಲಿತ ಸಂಘರ್ಷ ಸಮಿತಿ ಅಂಬೇಡ್ಕರ್‌ವಾದ

೧೦. ಸಮತಾ ಸೈನಿಕ ದಳ

೧೧. ಭೂಮಿ ಬೇಕು ದಲಿತ ರೈತ ಆಂದೋಲನ ಸಮಿತಿ

೧೨. ಕರ್ನಾಟಕ ದಲಿತ ಚಲವಾದಿ ಸಭಾ (ಧಾರವಾಡ)

೧೩. ಕರ್ನಾಟಕ ರಾಜ್ಯ ಆದಿ ಜಾಂಬವ ಮಾದಾರ ಸಂಘ

೧೪. ಅಖಿಲ ಕರ್ನಾಟಕ ಡಾ.ಬಾಬು ಜಗಜೀವನರಾವ್

೧೫. ದಲಿತ ಅಭಿವೃದ್ಧಿ ಒಕ್ಕೂಟ

೧೬. ಭಾರತ ರತ್ನ ಬಿ.ಆರ್.ಅಂಬೇಡ್ಕರ್ ವಿಚಾರ ವೇದಿಕೆ

೧೭. ಉತ್ತರ ಕರ್ನಾಟಕ ಎಸ್.ಸಿ/ಎಸ್.ಟಿ ಉದ್ದಿಮೆದಾರರ ಸಂಘ

ಈ ಎಲ್ಲ ''ದಲಿತ ಸಂಘಟನೆಗಳು ತನ್ನ ಶತ್ರು ಯಾರು ಎಂಬುದನ್ನು ತಿಳಿಯಬೇಕಾದರೆ ಮೊದಲು ತಾನು ಯಾರು ಎಂಬುದನ್ನು ಅರಿತಿರಬೇಕು. ಆದರೆ ಇದರ ಬಗ್ಗೆ ದಲಿತ ಸಂಘರ್ಷ ಸಮಿತಿ ಅಸ್ಪಷ್ಟವಾಗಿದೆ. ''ದಲಿತರು ಎಂದರೆ ಎಲ್ಲಾ ಜಾತಿಯ ಬಡವರು, ಬ್ರಾಹ್ಮಣರಲ್ಲೂ ಬಡವರಿದ್ದಾರೆ.'' ಎಂದು ದಲಿತ ಸಂಘರ್ಷ ಸಮಿತಿ ನಾಯಕರು ಸಭೆಗಳಲ್ಲಿ, ಕರಪತ್ರಗಳಲ್ಲಿ ಹೇಳಿದ್ದಾರೆ; ಹಾಡುಗಳಲ್ಲಿ ಹಾಡಿದ್ದಾರೆ. ಎಲ್ಲಾ ಜಾತಿಯ ಬಡವರ ಪರವಾಗಿ ಹೋರಾಡುವ ಸಂಘಟನೆಯಲ್ಲಿ ಕೇವಲ ಹೊಲೆಮಾದಿಗ ಅಸ್ಪೃಶ್ಯರು ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ಸದಸ್ಯರಾಗಿರುವುದು ಹೇಗೆ? ಬಡವರ ವಿಮೋಚನೆಗಾಗಿ ಹೋರಾಡುವ ಕಮ್ಯುನಿಸ್ಟ್ ಸಂಘಟನೆಗಳಿರುವಾಗ ದಲಿತ ಸಂಘಟನೆಯ ಅವಶ್ಯಕತೆ ಏನು? ಎಲ್ಲಾ ಜಾತಿಯ ಬಡವರೂ ಒಂದೇ ಸಂಘಟನೆಯಡಿಯಲ್ಲಿ ಬರುವುದನ್ನು ಬಿಟ್ಟು, ತಮ್ಮ ಜಾತಿ ಸಂಘಗಳನ್ನು ಮಾಡಿರುವುದು ಏಕೆ? ಆದರೆ ಹೊಲೆಯ ಮಾದಿಗರು ತಮ್ಮ ಜಾತಿಗಳನ್ನು ಮಾತ್ರ ಸಂಘಟನೆ ಮಾಡುವುದನ್ನು ಬಿಟ್ಟು, 'ಎಲ್ಲಾ ಜಾತಿಯ ಬಡವರಿಗೆ' ಬಾಗಿಲು ತೆರೆದಿರುವುದೇಕೆ? ಎಲ್ಲಾ ಜಾತಿಗಳಲ್ಲಿರುವ ಬಡವರು ಇಲ್ಲಿಯ ತನಕ ತಮ್ಮ ಜಾತಿಗಳಲ್ಲಿರುವ ಸಿರಿವಂತರ ವಿರುದ್ಧ ಹೋರಾಡಿರುವ ಘಟನೆ ಎಲ್ಲಾದರೂ ಉಂಟೆ? ಇಂತಹ ಅನೇಕ ಮೂಲಭೂತ ವಿಚಾರಗಳು ದಲಿತ ಸಂಘರ್ಷ ಸಮಿತಿ ನಾಯಕರನ್ನು ಕೆಣಕಿಲ್ಲ ಏಕೆ? ತಾನು ಯಾರು ಮತ್ತು ತನ್ನ ಶತ್ರು ಯಾರು ಎಂದು ಗೊತ್ತಿಲ್ಲದ ಬಳಿಕ 'ಹೋರಾಟ' ಯಾರ ವಿರುದ್ಧ ಮಾಡುವುದು? ಕೇವಲ ಹೊಲೆಮಾದಿಗರನ್ನು ಮಾತ್ರ ಒಳಗೊಂಡ ಸಂಘಟನೆಯು ಎಲ್ಲಾ ಜಾತಿಯ ಬಡವರ ವಿಮೋಚನೆಯ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದರಿಂದ ಎಲ್ಲರಿಗೂ ಅನ್ವಯವಾಗುವಂತಹ ಸಿದ್ಧಾಂತಗಳನ್ನೇ ದಲಿತ ಸಂಘರ್ಷ ಸಮಿತಿ ತನ್ನ ಸಂಘಟನೆಯ ತಳಹದಿಯನ್ನಾಗಿ ಮಾಡಿಕೊಳ್ಳಲಾಗಿದೆ.

ದಲಿತ ಸಂಘರ್ಷ ಸಮಿತಿಯು ವಿಘಟನೆಯ ಹಾದಿಹಿಡಿದು, ತನ್ನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಹಾಗೂ ದಲಿತ ಬಡ ಜನರಿಗೆ ಸರಿಯಾದ ನ್ಯಾಯ ಒದಗಿಸಲು ಸಾಧ್ಯವಾಗುತ್ತಿಲ್ಲದಿರುವಾಗ ಸಮಾಜದ ಎಲ್ಲಾ ವರ್ಗದ ಬಡವರಿಗೆ ಹೇಗೆ ನ್ಯಾಯ ದೊರಕಿಸಿಕೊಡಲು ಸಾಧ್ಯ. ಇಂತಹ ಗೊಂದಲಗಳಿಂದ ದಲಿತ ಸಂಘರ್ಷ ಸಮಿತಿ ಹೊರ ಬಂದು, ಭಿನ್ನಾಭಿಪ್ರಾಯಗಳನ್ನು ಮರೆತು ತನ್ನ ಜನರ ಮೇಲೆ ಆಗುತ್ತಿರುವ ಹಲ್ಲೆ, ದೌರ್ಜನ್ಯಗಳನ್ನು ನಿಲ್ಲಿಸುವಲ್ಲಿ ಶ್ರಮಿಸಬೇಕಾಗಿರುವ ಅವಶ್ಯಕತೆ ಇದೆ.

**ಬಾಗಲಕೋಟೆ ದಲಿತ ಸಂಘಟನೆಯಲ್ಲಿನ ದ್ವಂದ್ವ:**

ಇಂಥ ಪರಿಸ್ಥಿತಿ ಬಾಗಲಕೋಟೆ ಜಿಲ್ಲೆಯಲ್ಲಿಯೂ ಇದೆ. ಇಲ್ಲಿಯೂ ಸಹ ದಲಿತ ಸಂಘರ್ಷ ಸಮಿತಿ ಬಣಗಳಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಈಗಾಗಲೇ ಚರ್ಚಿಸಿದ್ದೇವೆ. ಬಾಗಲಕೋಟೆ ಜಿಲ್ಲೆಯಲ್ಲಿ ಒಟ್ಟು ಆರು ಬಣಗಳು ಪ್ರಸ್ತುತ ಕಾರ್ಯನಿರತವಾಗಿವೆ. ಅವುಗಳೆಂದರೆ;

೧. ದಲಿತ ಸಂಘರ್ಷ ಸಮಿತಿ (ಸಾಗರ ಬಣ)

೨. ದಲಿತ ಸಂಘರ್ಷ ಸಮಿತಿ (ನಾಗವಾರ ಬಣ)

೩. ದಲಿತ ಸಂಘರ್ಷ ಸಮಿತಿ (ಭೀಮವಾದ)

೪. ದಲಿತ ಸಂಘರ್ಷ ಸಮಿತಿ (ಮಾವಳ್ಳಿ ಶಂಕರ ಬಣ)

೫. ದಲಿತ ಸಂಘರ್ಷ ಸಮಿತಿ (ಪ್ರೊ.ಗಂಗಾಧರ ಮೂರ್ತಿ ಬಣ)

೬. ಸಮತಾ ಸೈನಿಕ ದಳ

ಇವು ತಮ್ಮದೇ ಆದ ತತ್ವಸಿದ್ಧಾಂತಗಳನ್ನು ರೂಪಿಸಿಕೊಂಡು ಹೋರಾಟ ಮಾಡುವುದರ ಮೂಲಕ ಕೆಲವು ಸಮಸ್ಯೆಗಳಲ್ಲಿ ಗೊಂದಲಗಳನ್ನು ಸೃಷ್ಟಿಸಿಕೊಳ್ಳುತ್ತಿದ್ದಾರೆ. ಯಾವುದೇ ಒಂದು ಸಮಸ್ಯೆಯನ್ನು ಎದುರಿಸುವಾಗ ಒಂದು ಬಣ ಅದರ ಪರವಾಗಿದ್ದರೆ ಮತ್ತೊಂದು ಬಣ ಅದರ ವಿರುದ್ಧವಾಗಿರುತ್ತದೆ. ಇಂತಹ ನಿರ್ಧಾರಗಳಿಂದ ದಲಿತ ಸಂಘರ್ಷ ಸಮಿತಿ ಏನು ಸಾಧಿಸಲು ಸಾಧ್ಯವಿಲ್ಲವಾದ ಕಾರಣ ತಮ್ಮ ನಡುವಿನ ಭಿನ್ನಾಭಿಪ್ರಾಯಗಳನ್ನು ದೂರ ಮಾಡಿ ಸಾಮಾಜಿಕ, ಆರ್ಥಿಕ, ರಾಜಕೀಯ ನ್ಯಾಯಕ್ಕಾಗಿ ಒಗ್ಗಟ್ಟಾಗಿ ಹೋರಾಡುವುದು ಅತ್ಯಂತ ಮುಖ್ಯವಾಗಿದೆ ಎಂಬುದು ಗಮನಿಸಬೇಕಾದ ಅಂಶ.

ದಲಿತ ನಾಯಕರು ಸಂಪೂರ್ಣವಾಗಿ ರಾಜಕೀಯಕ್ಕೂ ಸೇರದೇ, ಸಂಪೂರ್ಣವಾಗಿ ದಲಿತ ಚಳವಳಿಯಲ್ಲಿಯೂ ಭಾಗವಹಿಸದೇ ಅತಂತ್ರ ಸ್ಥಿತಿಯಲ್ಲಿದ್ದಾರೆ. ರಾಜಕೀಯ ಅಧಿಕಾರದಿಂದ ದಲಿತರ ಸಮಸ್ಯೆಗಳನ್ನು ನಿವಾರಿಸಬೇಕೋ ಅಥವಾ ಚಳವಳಿಯ ಮೂಲಕ ನಿವಾರಿಸಬೇಕೋ ಎಂಬ ಗೊಂದಲದಿಂದ ನಲುಗುತ್ತಿದ್ದಾರೆ. ಕೆಲವು ನಾಯಕರು ಪ್ರತ್ಯೇಕ ಮೀಸಲಾತಿ ಬೇಕು ಎಂದರೆ ಮತ್ತೆ ಕೆಲವು ನಾಯಕರು ಒಳಮೀಸಲಾತಿ ಬೇಡ ಎಲ್ಲರೂ ಒಂದಾಗೋಣ ಎಂದು ಹೇಳುವ ಮೂಲಕ ದ್ವಂದ್ವದಲ್ಲಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಜಮೀನ್ದಾರಿ ವರ್ಗದ ವಿರುದ್ಧ ಸ್ಥಳೀಯ ನಾಯಕರು ಕೆಲವು ಸಂದರ್ಭಗಳಲ್ಲಿ ಹೊಂದಾಣಿಕೆ ಮಾಡಿಕೊಂಡು ಹೋಗಬೇಕಾಗುತ್ತವೆ. ಪೊಲೀಸ್, ಕಾನೂನು, ಕೋರ್ಟು ಅಂತ ಬಡ ದಲಿತರಿಗೆ ಸಾಕಷ್ಟು ಹಣ ಖರ್ಚು ಮಾಡುವ ಆರ್ಥಿಕ ಸ್ಥಿತಿ ಇಲ್ಲದಿರುವ ಎನ್ನುವ ಕಾರಣಕ್ಕೆ ರಾಜಿ ಮಾಡಿಕೊಳ್ಳಬೇಕಾದ ಅವಶ್ಯಕತೆ ಇರುವುದರಿಂದ ಸ್ಥಳೀಯ ನಾಯಕರಲ್ಲೇ ಭಿನ್ನಾಭಿಪ್ರಾಯ ಮೂಡುತ್ತಿವೆ. ರಾಜಿಮಾಡಿಕೊಳ್ಳುವುದು ಒಳ್ಳೆಯದು ಎಂದು ಕೆಲವರ ವಾದವಾದರೆ, ಕಾನೂನು ಸಮರ ಸಾರಬೇಕೆಂಬುದು ಇನ್ನೂ ಕೆಲವರ ವಾದವಾಗಿರುವ ಕಾರಣದಿಂದ ಇದು ನಾಯಕರಲ್ಲೇ ಗೊಂದಲದ ವಾತಾವರಣ ನಿರ್ಮಿಸುತ್ತಿದೆ.

**೮.೨. ಸ್ಥಳೀಯ ರಾಜಕೀಯ ವಿಶ್ಲೇಷಣೆ:**

ರಾಜಕೀಯ ಅಧಿಕಾರಗಳಿಂದ ವಂಚಿತರಾದ ದಲಿತ ವರ್ಗಗಳಿಗೆ ನ್ಯಾಯ ಸಮ್ಮತವಾದ ಹಕ್ಕುಗಳು ದೊರೆತದ್ದು ಅಂಬೇಡ್ಕರ್ ಅವರ ಹೋರಾಟದ ಮುಖಾಂತರ. ಇಲ್ಲಿ ಜಾತಿ ಪದ್ಧತಿ ನ್ಯಾಯಿಕ ಸ್ಥಾನಮಾನಗಳನ್ನು

ಕೋಷ್ಟಕ-೩

| ಸಂಸ್ಥೆಗಳು | ಚುನಾಯಿತ ಒಟ್ಟು ಸದಸ್ಯರು | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗಗಳು | | ಸಾಮಾನ್ಯ ವರ್ಗ |
|---|---|---|---|---|---|---|
| | | | | ಎ | ಬಿ | |
| ಜಿಲ್ಲಾ ಪಂಚಾಯತ್ | ೮೯೦ (೩೩೯) | ೧೫೮ (೬೩) | ೫೪ (೩೧) | ೨೩೯ (೮೪) | ೬೦ (೨೫) | ೩೭೯ (೧೩೬) |
| ತಾಲ್ಲೂಕು ಪಂಚಾಯತ್ | ೩೨೫೫ (೧೩೭೫) | ೫೮೩ (೨೫೨) | ೨೪೪ (೧೮೨) | ೮೭೬ (೩೬೧) | ೨೧೭ (೭೧) | ೧೩೩೫ (೫೦೯) |
| ಗ್ರಾಮ ಪಂಚಾಯತ್ | ೮೦೦೭೩* (೩೫೯೨೨) | ೧೪೮೭೧ (೭೨೧೮) | ೭೪೯೯ (೫೮೭೩) | ೨೧೦೭೯ (೫೮೭೩) | ೫೫೭೩ (೪೩೫) | ೩೧೦೫೧ (೧೨೧೧೫) |

* ೫೬೪೮ ಗ್ರಾಮ ಪ್ರಂಚಾಯತ್‌ಗಳಿಗೆ ಸಂಬಂಧಿಸಿದ ಮಾಹಿತಿ

** ಆವರಣದಲ್ಲಿ ಸೂಚಿಸಿರುವ ಸಂಖ್ಯೆಯು ಮಹಿಳಾ ಸದಸ್ಯರ ಮೀಸಲು ಪ್ರಮಾಣದಲ್ಲಿರುತ್ತದೆ.[೧೨]

ಮೂಲ: ಆರ್.ಡಿ.ಪಿ.ಆರ್. ವರದಿ-೨೦೦೧

ಈ ರೀತಿ ಜಾತಿ ಮತ್ತು ಲಿಂಗವಾರು ಅಧಿಕಾರ ಹಂಚಿಕೆಯಿಂದ ಪ್ರಬಲ ವರ್ಗದವರ ರಾಜಕೀಯ ದಬ್ಬಾಳಿಕೆಗಳು ಕುಗ್ಗತೊಡಗಿದವು. ಅದರಲ್ಲೂ ಅನಕ್ಷರಸ್ಥ ಗ್ರಾಮೀಣ ಮಹಿಳೆಯರು ಅಧಿಕಾರದ ಚುಕ್ಕಾಣಿ ಹಿಡಿದು ನಾಡನ್ನು ಆಳುವವರಾಗಿರುವದರಿಂದ ಪ್ರಬಲ ವರ್ಗದವರ ಕೈಗೊಂಬೆಗಳಂತೆ ಆಡಳಿತ ನಡೆಸಬೇಕಾಗುತ್ತದೆ. ದಲಿತ-ಹಿಂದುಳಿದ ವರ್ಗಗಳಲ್ಲಿ ಗುಣಾತ್ಮಕ ವಿದ್ಯಾವಂತರ ಸಂಖ್ಯೆ ಜಾಸ್ತಿಯಾದರೆ, ಪ್ರಾದೇಶಿಕ ಆಡಳಿತ ಕೂಡ ಸುಧಾರಿಸುವುವು. ಇಂಥ ಅಧಿಕಾರ ವಿಭಜನೆ ಕೆಳವರ್ಗದವರಲ್ಲಿ ಆಗುತ್ತಿರುವುದರಿಂದ ದೇಶವು ಅಭಿವೃದ್ಧಿಯತ್ತ ಸಾಗಿದೆ ಎಂದು ಅಭಿಪ್ರಾಯಪಡಬಹುದು.

ಮೀಸಲಾತಿ ಅನುಷ್ಠಾನದಿಂದ ಸ್ಥಳೀಯ ರಾಜಕೀಯದಲ್ಲಿ ದಲಿತರು ಅಧಿಕಾರ ಪಡೆದರೂ ಪ್ರಬಲ ವರ್ಗದವರ ದಬ್ಬಾಳಿಕೆ ಏನು ಕಡಿಮೆ ಆಗಿಲ್ಲ. ಕಾರಣ ಆ ಊರಿನ ಅಥವಾ ಹಳ್ಳಿಯಲ್ಲಿನ ಗೌಡನ ಮುಷ್ಠಿಯಲ್ಲಿಯೇ ಅಧಿಕಾರ ಕೇಂದ್ರೀಕೃತವಾಗಿದೆ. ದಲಿತ ಮಹಿಳೆ ಅಥವಾ ಪುರುಷ ಯಾವುದೇ ಸ್ಥಳೀಯ ಪಂಚಾಯತ್‌ನ ಅಧ್ಯಕ್ಷರಾದರೂ ಊರಿನ ಗೌಡನ ಆಜ್ಞೆಯಂತೆಯೇ ಆಡಳಿತ ನಡೆಯುತ್ತದೆ. ಮುಗ್ಧ, ಅನಕ್ಷರಸ್ಥ, ತಮ್ಮ ಮಾತಿನಂತೆ ನಡೆಯುವ ಸದಸ್ಯನನ್ನು ಮಾತ್ರ ಅಧ್ಯಕ್ಷರನ್ನಾಗಿ ಮಾಡುತ್ತಾರೆ. ಇವರ ಮೂಲಕ ಮತ್ತೆ ದೌರ್ಜನ್ಯ, ದಬ್ಬಾಳಿಕೆ ನಡೆಸುತ್ತಿರುವುದು ಕಂಡುಬರುತ್ತದೆ. ಗ್ರಾಮೀಣ ಪ್ರದೇಶದ ಮೀಸಲಾತಿ ಆಧಾರಿತ ಗ್ರಾಮ ಪಂಚಾಯತ್ ಮಟ್ಟದ ರಾಜಕೀಯದಲ್ಲಿನ ಮಾನವ ಹಕ್ಕುಗಳ ಉಲ್ಲಂಘನೆ ಹಾಗೂ ಅಸ್ಪೃಶ್ಯತೆಯ ಸ್ವರೂಪ ವಿಶೇಷವಾದದ್ದು, ದಲಿತ ಜನಪ್ರತಿನಿಧಿಗಳಿಗೆ ಹಾಗೂ ಪಂಚಾಯತ್ ಮುಖಂಡರಿಗೆ ಮಾನಸಿಕ ಹಾಗೂ ದೈಹಿಕ ದೌರ್ಜನ್ಯ ಹಾಗೂ ಅವರ ಹಕ್ಕುಗಳ ಉಲ್ಲಂಘನೆ ಪ್ರತಿ ದಿನ ನಡೆಯುತ್ತಿರುತ್ತವೆ. ಬದುಕಿನ ಆಶ್ರಯವೇ ಗ್ರಾಮವಾಗಿರುವುದರಿಂದ ಎಷ್ಟೋ ದಲಿತರು ಈ ದೌರ್ಜನ್ಯವನ್ನು ಮನೆ-ಮನದಲ್ಲಿಯೇ ಅಡಗಿಸಿ ಅದರ ನೆರಳಿನಲ್ಲಿಯೇ ಪ್ರತಿ ದಿನ ಬದುಕು ಸಾಗಿಸುತ್ತಿರುವುದು ಸರ್ವೇಸಾಮಾನ್ಯವಾಗಿದೆ.[೧೩] ಇಂತಹ ಪರಿಸ್ಥಿತಿಯಿಂದ ದಲಿತರು ಹೊರಬರಬೇಕಾದರೆ ಶೈಕ್ಷಣಿಕವಾಗಿ, ಆರ್ಥಿಕವಾಗಿ ಪ್ರಬಲರಾಗಬೇಕಾಗಿದೆ. ಇವತ್ತಿನ ಜಾಗತೀಕರಣ, ಖಾಸಗೀಕರಣದ ಸ್ಪರ್ಧಾತ್ಮಕ ಜಗತ್ತಿನಲ್ಲಿ ಬದುಕಬೇಕಾದರೆ ಸ್ಥಳೀಯ ಮಟ್ಟದಿಂದಲೇ ದಲಿತರು ಬಲಿಷ್ಠರಾಗಬೇಕಾದ ಅವಶ್ಯಕತೆ ಇವೆ.

## ಕೋಷ್ಟಕ ೪ ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗಳಲ್ಲಿರುವ ಮೀಸಲಾತಿ ವಿವರ

| ಜಾತಿವಾರು ಮೀಸಲಾತಿ | ತಾಲ್ಲೂಕು ಪಂಚಾಯತ್ | | | | | | ಗ್ರಾಮ ಪಂಚಾಯತ್ | | | | | |
|---|---|---|---|---|---|---|---|---|---|---|---|---|
| | ಅಧ್ಯಕ್ಷ | | | ಉಪಾಧ್ಯಕ್ಷ | | | ಅಧ್ಯಕ್ಷ | | | ಉಪಾಧ್ಯಕ್ಷ | | |
| | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| ಪರಿಶಿಷ್ಟ ಜಾತಿ | ೨೧ | ೧೧ | ೩೨ | ೨೧ | ೧೧ | ೩೨ | ೬೨೬ | ೪೦೭ | ೧೦೩೩ | ೬೨೬ | ೪೦೭ | ೧೦೩೩ |
| ಪರಿಶಿಷ್ಟ ಪಂಗಡ | ೦೬ | ೦೩ | ೦೯ | ೦೬ | ೦೩ | ೦೯ | ೧೨೩ | ೧೭೩ | ೨೯೬ | ೧೨೩ | ೧೭೩ | ೨೯೬ |
| ಹಿಂದುಳಿದ ವರ್ಗ ಎ | ೩೧ | ೧೫ | ೪೬ | ೩೧ | ೧೫ | ೪೬ | ೯೮೭ | ೫೨೯ | ೧೫೧೬ | ೯೮೭ | ೫೨೯ | ೧೫೧೬ |
| ಹಿಂದುಳಿದ ವರ್ಗ ಬಿ | ೦೮ | ೦೪ | ೧೨ | ೦೮ | ೦೪ | ೧೨ | ೨೦೯ | ೧೬೧ | ೩೭೦ | ೨೦೯ | ೧೬೧ | ೩೭೦ |
| ಸಾಮಾನ್ಯ ವರ್ಗ | ೫೦ | ೨೬ | ೭೬ | ೫೦ | ೨೬ | ೭೬ | ೧೫೭೦ | ೮೭೪ | ೧೪೪೪ | ೧೫೭೦ | ೮೭೪ | ೨೪೪೪ |
| ಒಟ್ಟು | ೧೧೬ | ೫೯ | ೧೭೫ | ೧೧೬ | ೫೯ | ೧೭೫ | ೩೫೧೫ | ೨೧೪೪ | ೫೬೫೯ | ೩೫೧೫ | ೨೧೪೪ | ೫೬೫೯ |

೪.೩. ದಲಿತ ಪತ್ರಿಕೆಗಳು

ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಯಲ್ಲಿ ಸಹ ದಲಿತ ಪತ್ರಿಕೆಗಳು ಪ್ರಕಟವಾಗುತ್ತಿದ್ದು ದಲಿತರ ದನಿಯಾಗಿ ಕೆಲಸ ಮಾಡುತ್ತಿವೆ. ಈ ಭಾಗದ ಜನರ ಸಮಸ್ಯೆಗಳನ್ನು ಪತ್ರಿಕೆ ಮೂಲಕ ತಿಳಿಸುವುದರಿಂದ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕಾರ್ಯದಲ್ಲಿ ನಿರತವಾಗಿವೆ. ಯಾವುದೇ ಸಮಸ್ಯೆಯನ್ನು ಅಥವಾ ವಿಷಯವನ್ನು ಜನರಿಗೆ ಬಹಳ ಬೇಗ ತಲುಪಿಸುವಂತಹ ಕೆಲಸ ಪತ್ರಿಕೆಗಳು ಮಾಡುತ್ತಿವೆ. ಇದರಿಂದಾಗಿ ರಾಜಕೀಯ ನಾಯಕರ ಮತ್ತು ಸರಕಾರದ ಗಮನ ಸೆಳೆದು, ಅದಕ್ಕೆ ಪರಿಹಾರ ಸಿಗುವಂತೆ ಮಾಡುವಲ್ಲಿ ಪತ್ರಿಕೆಗಳು ಸಹಾಯಕವಾಗಿವೆ. ಸರಕಾರದ ತಪ್ಪನ್ನು, ನಾಯಕರ ತಪ್ಪನ್ನು ಹೇಳುವುದರಿಂದ ಅಧಿಕಾರಿಗಳಾಗಲೀ, ರಾಜಕಾರಣಿಗಳಾಗಲೀ ಎಚ್ಚರಿಕೆಯಿಂದ, ಜವಾಬ್ದಾರಿಯಿಂದ ಕಾರ್ಯನಿರ್ವಹಿಸುವಂತೆ ಮಾಡುವಲ್ಲಿ ಪತ್ರಿಕೆಗಳ ಪಾತ್ರ ಬಹಳ ಮುಖ್ಯವಾದುದು. ಅಂಥ ಪ್ರಾದೇಶಿಕ ಪತ್ರಿಕೆಗಳು ಹೀಗಿವೆ.

೧. **ಮೂಕನಾಯಕ:** ಶರಣಕುಮಾರ ಕಂಬಾಗಿ ಅವರ ಸಂಪಾದಕತ್ವದಲ್ಲಿ ಬಾಗಲಕೋಟೆಯಿಂದ ಬರುವ ಈ ಪತ್ರಿಕೆ ದಲಿತರ ಮೇಲಿನ ದೌರ್ಜನ್ಯಗಳನ್ನು ಮತ್ತು ಅಂಬೇಡ್ಕರ್ ತತ್ವ ಚಿಂತನೆಗಳನ್ನು ಪ್ರಕಟಗೊಳಿಸುತ್ತದೆ. ಸಮತಾ ಸೈನಿಕ ದಳದ ಅಧ್ಯಕ್ಷರು ಆದ ಶರಣಕುಮಾರ ಕಂಬಾಗಿ ಅವರ ಸಂಪಾದಕತ್ವದಲ್ಲಿ ದಲಿತರ ದನಿಯಾಗಿ ಹೊರಬರುತ್ತಿದೆ.

೨. **ವಿಜಯಧೂತ:** ಬಿಜಾಪುರದ ಮೂಲ ಅಸ್ಪೃಶ್ಯರ ರಕ್ಷಣಾ ವೇದಿಕೆ ಸಂಘಟನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಸುವರ್ಣ ರವಿಕುಮಾರ. ಖಾಸೆ ಎಂಬುವವರ ಸಂಪಾದಕತ್ವದಲ್ಲಿ ಹೊರಬರುತ್ತಿರುವ ಈ ಪತ್ರಿಕೆ ಅಸ್ಪೃಶ್ಯರ ಅಂತರಾಳದ ಕೂಗಾಗಿ ಕಾರ್ಯನಿರ್ವಹಿಸುತ್ತಿದೆ.

೩. **ನಮ್ಮ ಲಡಾಯಿ:** ವಾಸು ಕಾಳೆ ಅವರ ಸಂಪಾದಕತ್ವದಲ್ಲಿ ನಡೆಯುವ ಈ ಪತ್ರಿಕೆ ಹರನ ಶಿಕಾರಿ ಸಮುದಾಯದ ಬಗ್ಗೆ ವರದಿ ಮಾಡುತ್ತದೆ. ಅಸ್ಪೃಶ್ಯರಲ್ಲಿ ಅತ್ಯಂತ ಹಿಂದುಳಿದ ಈ ಜನಾಂಗದ ಸಮಸ್ಯೆಗಳನ್ನು, ಸಮುದಾಯದ ಪದ್ಧತಿ, ಕೆಲವು ಅನಿಷ್ಟ ಆಚರಣೆಗಳ ಬಗ್ಗೆ ಪ್ರಕಟಿಸುತ್ತಾ, ಆಧುನಿಕ ಯುಗದ ಪರಿಚಯ ಮೂಡಿಸುವಲ್ಲಿ ಪ್ರಯತ್ನಿಸುತ್ತಿದೆ.

೪. **ಜಮಖಂಡಿ ಟೈಮ್ಸ್ :** ಅಶೋಕ ಬೀಳಗಿ ಅವರ ಸಂಪಾದಕತ್ವದಲ್ಲಿ ಹುಟ್ಟಿಕೊಂಡ ಈ ಪತ್ರಿಕೆ ಜಮಖಂಡಿ ಸುತ್ತಮುತ್ತಲಿನ ದಲಿತರ ದನಿಯಾಗಿ ಕೆಲಸ ಮಾಡುತ್ತಿದೆ. ದಲಿತ ಪರ ಚಿಂತನೆ, ಲೇಖನಗಳನ್ನು ಪ್ರಕಟಿಸುತ್ತಿದೆ.

೫. **ದಲಿತ ಸೂರ್ಯ :** ಯಮನಪ್ಪ ಕಲ್ಲಪ್ಪ ಸಣಕಾರ. ಸಂಪಾದಕರಾಗಿದ್ದು ಬಿಜಾಪುರದಲ್ಲಿ ಬಿತ್ತರಗೊಳ್ಳುತ್ತಿರುವ ಪತ್ರಿಕೆಯಾಗಿದೆ. ದಲಿತರ ಮೇಲಿನ ದೌರ್ಜನ್ಯ, ದಲಿತ ಸಂಘಟನೆಗಳ ಪ್ರತಿಭಟನೆ, ಧರಣಿ, ಒತ್ತಾಯಗಳು, ಬೇಡಿಕೆಗಳ, ವರದಿಮಾಡುತ್ತಿದೆ.

೬. ಬೈರಜಂ : ಬಿಜಾಪುರದಲ್ಲಿ ಈ ಪತ್ರಿಕೆ ಪ್ರಕಟಗೊಳ್ಳುತ್ತಿದೆ. ತುಕಾರಾಮ ಚಲವಾದಿ ಈ ಪತ್ರಿಕೆ ಸಂಪಾದಕರಾಗಿದ್ದು ದಲಿತಪರ ಕಾಳಜಿ ಉಳ್ಳ ಪತ್ರಿಕೆಯಾಗಿದೆ.

೭. ಅಗ್ನಿಜ್ವಾಲೆ : ಆನಂದ ಅವಧಿ ಎಂಬುವವರ ಸಂಪಾದಕತ್ವದಲ್ಲಿ ಈ ಪತ್ರಿಕೆ ಪ್ರಕಟಗೊಳ್ಳುತ್ತಿದೆ. ಅಂಬೇಡ್ಕರ್ ವಿಚಾರಧಾರೆಯ ಪ್ರಕಾರ ದಲಿತ ಚಳವಳಿಯ ಬೆಳವಣಿಗೆ ಕುರಿತು ವರದಿ ಮಾಡುತ್ತದೆ. ಈ ಪತ್ರಿಕೆ ಬಿಜಾಪುರದಿಂದ ಹೊರಬರುತ್ತಿದೆ.

೮. ಭೀಮಕ್ರಾಂತಿ : ರಾಹುಲ್ ಮಾನಕರ್ ಸಂಪಾದಕತ್ವದಲ್ಲಿ ಹೊರ ಬರುತ್ತಿರುವ ಈ ಪತ್ರಿಕೆ ದಲಿತ ಜನಾಂಗದಲ್ಲಿ ಅಂಬೇಡ್ಕರ್ ತತ್ವ, ಕ್ರಾಂತಿ ವಿಚಾರಗಳನ್ನು ತುಂಬುವಲ್ಲಿ ಕಾರ್ಯನಿರ್ವಹಿಸುತ್ತಿದೆ.

೯. ಭಾರತದ ಕ್ರಾಂತಿ : ರಾಜೇಶ ದೊಡಮನಿ ಅವರ ಸಂಪಾದಕತ್ವದಲ್ಲಿ ಬರುತ್ತಿರುವ ಪತ್ರಿಕೆಯಾಗಿದ್ದು, ದಲಿತ ಸಂಘರ್ಷ ಸಮಿತಿ ಕಾರ್ಯಚಟುವಟಿಕೆಗಳ ವರದಿಯನ್ನು ತಿಳಿಸುವ ಕೆಲಸ ಮಾಡುತ್ತಿದೆ. ಈ ಪತ್ರಿಕೆ ಬಿಜಾಪುರದಿಂದ ಪ್ರಕಟಗೊಳ್ಳುತ್ತಿದೆ.

೧೦. ರವಿವಾಣಿ : ಬಿಜಾಪುರದಿಂದ ಹೊರಡುತ್ತಿರುವ ಈ ಪತ್ರಿಕೆಯ ಸಂಪಾದಕರು ಸಚೇಂದ್ರ ಲಂಬೂ. ಇವರು ದಲಿತ ಹೋರಾಟಗಳ ಹಾಗೂ ದಲಿತರ ಮೇಲೆ ನಡೆದ ಘಟನೆಗಳ ವಿವರವನ್ನು ಪ್ರಕಟಿಸುತ್ತಾರೆ. ಇದರಿಂದ ಜನರ ಮನಸ್ಸನ್ನು ದಲಿತ ಚಳವಳಿಯ ಕಡೆ ಸೆಳೆಯುವ ಪ್ರಯತ್ನ ಮಾಡುವಲ್ಲಿ ಈ ಪತ್ರಿಕೆ ಶ್ರಮಿಸುತ್ತಿದೆ ಎನ್ನಬಹುದು.

೧೧. ಬಿಜಾಪುರ ವಾಯ್ಸ್ : ಬಿರೇಂದ್ರ ಲಂಬೂ ಸಂಪಾದಕತ್ವದಲ್ಲಿ ಬಿಜಾಪುರದಿಂದ ಪ್ರಕಟಗೊಳ್ಳುತ್ತಿರುವ ಪತ್ರಿಕೆಯಾಗಿದೆ. ದಲಿತ ಸಂಘಟನೆಗಳ ದನಿಯಾಗಿ, ಅಂಬೇಡ್ಕರ್ ವಿಚಾರಗಳನ್ನು ಜನರಿಗೆ ತಲುಪಿಸುವ ಕಾರ್ಯದಲ್ಲಿ ನಿರತವಾಗಿದೆ.

೧೨. ವೀರವಾಣಿ ಗಣೇಶ ನಾಗಟಾನ ಅವರ ಸಂಪಾದಕತ್ವದಲ್ಲಿ ಬಿಜಾಪುರದಿಂದ ಹೊರಬರುತ್ತಿರುವ ಈ ಪತ್ರಿಕೆ ದಲಿತರು, ಶೋಷಿತರ ಸಮಸ್ಯೆಗಳನ್ನು ತನ್ನ ಪತ್ರಿಕೆಯಲ್ಲಿ ಪ್ರಕಟಿಸುವುದರ ಮೂಲಕ ದಲಿತರನ್ನು ಜಾಗೃತಗೊಳಿಸುತ್ತಿದೆ.''[೫೯]

ಬಿಜಾಪುರ ಮತ್ತು ಬಾಗಲಕೋಟೆಯಲ್ಲಿ ಇಂತಹ ಅನೇಕ ಪತ್ರಿಕೆಗಳು ಕಾರ್ಯನಿರ್ವಹಿಸುತ್ತಿವೆ. ದಿಗ್ಭ್ರಮೆ ಪತ್ರಿಕೆ ಉಮೇಶ್, ಆಕಾಶ್ ಅವರ ಸಂಪಾದಕತ್ವದಲ್ಲಿ, ಪರಿವರ್ತಕ ಅನಿಲ ಹೊಸಮನಿ ಸಂಪಾದಕತ್ವ, ಸತ್ಯಶೋಧಕ, ರಕ್ತಕಾಲುವೆ, ಹಲೋ ಗುನ್ನಾಪುರ, ಸಾಯಿ ದರ್ಶನ, ಲೇಖನಿ ಸಾಮ್ರಾಟ, ಹಸಿದ ಹೆಬ್ಬುಲಿ, ವಿಶ್ವಚೇತನ, ದಂಡಯಾತ್ರೆ, ಸ್ಟಾರ್ ಆಫ್ ಬಿಜಾಪುರ, ಗೌತಮ, ಈ ದಿನ ರಾತ್ರಿ, ಕ್ರಾಂತಿಧ್ವನಿ, ಕರ್ನಾಟಕ ಕಿಂಗ್, ಹಲೋ ಮಂಗಳೂರು, ಲಿಂಗೇಶ, ಕ್ರಾಂತಿಧೂತ ಮುಂತಾದ ಪತ್ರಿಕೆಗಳು ಪ್ರಕಟಗೊಳ್ಳುತ್ತಿವೆ. ಇವುಗಳು ದಲಿತಪರ ಚಿಂತನೆ, ವಿಚಾರ, ಅಂಬೇಡ್ಕರ್ ಸಿದ್ಧಾಂತ ಹಾಗೂ ದಲಿತ ಸಂಘಟನೆಗಳ ಹೋರಾಟ, ಧ್ಯೇಯ ಉದ್ದೇಶಗಳನ್ನು ಜನರಿಗೆ ತಲುಪಿಸುವ ಕಾರ್ಯಮಾಡುತ್ತಿವೆ.

ಈ ಎಲ್ಲಾ ಪತ್ರಿಕೆಗಳ ಉದ್ದೇಶ ದಲಿತ ಚಳವಳಿ, ಅಂಬೇಡ್ಕರ್ ವಿಚಾರಗಳು ಹಾಗೂ ದಲಿತರಿಗೆ ಸಿಗಬೇಕಾದ ಹಕ್ಕನ್ನು ಪಡೆದುಕೊಳ್ಳಲು ದಲಿತರೆಲ್ಲರೂ ಒಂದಾಗಬೇಕು. ಅದಕ್ಕಾಗಿ ಶ್ರಮಿಸಬೇಕು ಮತ್ತು ಹೋರಾಡಬೇಕು ಎಂಬುದಾಗಿದೆ. ಗ್ರಾಮೀಣ ಮಟ್ಟದ ದಲಿತರು ಸಹ ಒಕ್ಕರಲಿನಿಂದ ದಲಿತ ಚಳವಳಿಯಲ್ಲಿ ಭಾಗವಹಿಸಬೇಕು ಈ ಸಮಾಜದಲ್ಲಿ ದಲಿತರ ಸ್ಥಾನಮಾನ ಬದಲಾಗಬೇಕು ಆ ನಿಟ್ಟಿನಲ್ಲಿ ಹಳ್ಳಿಯಿಂದ, ಪಟ್ಟಣದವರೆಗಿನ ದಲಿತರೆಲ್ಲರೂ ಮತ್ತು ದಲಿತ ನೌಕರರು, ದಲಿತ ವಿದ್ಯಾರ್ಥಿಗಳು, ದಲಿತ ಮಹಿಳೆಯರು, ಸಂಘ-ಸಂಸ್ಥೆಗಳು ಎಲ್ಲವೂ ಒಗ್ಗಟ್ಟಿನಿಂದ ಒಂದೇ ಧ್ಯೇಯ ಧೋರಣೆ ಇಟ್ಟುಕೊಂಡು ಹೋರಾಡಬೇಕು ಎಂಬುದಾಗಿದೆ.

**ಅಡಿ ಟಿಪ್ಪಣಿಗಳು**

೧. ಮೊಗಳ್ಳಿ ಗಣೇಶ., ೧೯೯೯, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೪

೨. ಅದೇ, ಪು.೬೫

೩. ಅದೇ, ಪು.೭೫

೪. ಚಂದ್ರಶೇಖರ್.ಟಿ.ಆರ್., (ಸಂ), ೨೦೦೫, ದಲಿತ ಅಧ್ಯಯನ, (ಲೇ), ಲಕ್ಷ್ಮಣ್ ತೆಲಗಾವಿ, ಬಿ.ಎಂ.ಪುಟ್ಟಯ್ಯ, ಟಿ.ಆರ್.ಚಂದ್ರಶೇಖರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೭೭

೫. ಅದೇ, ಪು.೩೮೫

೬. ಅದೇ, ಪು.೩೮೬

೭. ಅದೇ, ಪು.೩೮೯

೮. ಸನತ್ ಕುಮಾರ್ ಬೆಳಗಲಿ, ಸಮಕಾಲೀನ ಒತ್ತಡಗಳು ಮತ್ತು ದಲಿತರ ಹಕ್ಕುಗಳು, (ಸಂವಾದ ಮಾಸ ಪತ್ರಿಕೆ ಸೆಪ್ಟೆಂಬರ್ ೨೦೦೩) ಪು.೨೯

೯. ದಲಿತ ವಾಯ್ಸ್, (ಮಾಸ ಪತ್ರಿಕೆ ಜನವರಿ ೧೯೯೭) ಪು.೧

೧೦. ದಾಸನೂರು ಕೂಸಣ್ಣ, ೨೦೦೫, ರೈತರ ಆತ್ಮಹತ್ಯೆ ಮತ್ತು ದಲಿತರ ನವಬ್ರಾಹ್ಮಣಿಕೆ?, ಮಾತಂಗ ಪ್ರಕಾಶನ, ಮೈಸೂರು, ಪು.೧೦೫

೧೧. ಅದೇ, ಪು.೧೦೬

೧೨. ಅದೇ, ಪು.೧೨೦

೧೩. ಅದೇ, ಪು.೧೨೧

೧೪. ಚಿನ್ನಸ್ವಾಮಿ ಸೋಸಲೆ.ಎನ್., ೨೦೦೮, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೭೭

೧೫. ಸಂದರ್ಶನದಿಂದ ದೊರೆತ ಮಾಹಿತಿ

* * *

## ಅಧ್ಯಾಯ-೫

## ಉಪಸಂಹಾರ

ಇತಿಹಾಸ ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು ಎಂಬ ಬಾಬಾಸಾಹೇಬ ಅಂಬೇಡ್ಕರ್ ಅವರ ಮಾತು ಸತ್ಯವಾದುದು. ಯಾವುದೇ ಸಮಾಜ, ರಾಷ್ಟ್ರ ತನ್ನ ಇತಿಹಾಸವನ್ನು ಮರೆತರೇ ಅದಕ್ಕೆ ಅಸ್ತಿತ್ವವೇ ಇರುವುದಿಲ್ಲ. ಚರಿತ್ರೆ ಇಲ್ಲದವರು ಚರಿತ್ರೆ ಹುಟ್ಟು ಹಾಕಲು ಸಾಧ್ಯವಿಲ್ಲ. ಯಾವುದೇ ಚಳವಳಿಯಾಗಲಿ, ಹೋರಾಟವಾಗಲಿ ಅದಕ್ಕೆ ತನ್ನದೆಯಾದ ಇತಿಹಾಸ ಇರುವುದನ್ನು ಕಾಣುತ್ತೇವೆ. ಕಾಲಕ್ಕೆ ತಕ್ಕಂತೆ ಇತಿಹಾಸ ಬದಲಾಗುತ್ತಿರುತ್ತದೆ. ಹೊಸ ಸಂಶೋಧನೆಗಳು ನಡೆದು ಹೊಸ ವಿಷಯಗಳು ಬೆಳಕಿಗೆ ಬರುತ್ತವೆ. ಹಾಗೆ ಸಮಾಜದ ಅವಶ್ಯಕತೆಗೆ ಅನುಗುಣವಾಗಿ ಹೋರಾಟಗಳು ನಡೆಯುತ್ತಲೇ ಇರುತ್ತವೆ. ಈ ಹಿನ್ನೆಲೆಯಲ್ಲಿ ಭಾರತೀಯರು ಪರಕೀಯರ ದಾಸ್ಯದಿಂದ ಮುಕ್ತರಾಗಲು ನಡೆಸಿದ ಹೋರಾಟದ ವಿಧಾನ ಮತ್ತು ತಮ್ಮದೆಯಾದ ಆಸ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಇಂದು ಹಲವಾರು ಚಳವಳಿಗಳು ನಡೆದಿವೆ. ಅಂದು ಅವರು ಎದುರಿಸಿದ ಸಮಸ್ಯೆಗಳು, ನಿಭಾಯಿಸಿದ ರೀತಿ, ಸಮಾಜದ ಮೇಲಾದ ಪರಿಣಾಮ ಇವೆಲ್ಲಾ ಪ್ರಸ್ತುತ ಜನರಿಗೆ ಮಾರ್ಗದರ್ಶನಗಳಾಗುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ. ಚಳವಳಿಗಳು ಸಮುದಾಯದಲ್ಲಿ ತಮ್ಮ ಹಕ್ಕು-ಬಾಧ್ಯತೆಗಳನ್ನು ಸಮಾನತೆಯನ್ನು ಪಡೆಯುವ ಕಾರ್ಯದಲ್ಲಿ ಪ್ರಯತ್ನಶೀಲವಾಗಿವೆ. ಹಾಗೆ ಸಮಾಜದ ಎಲ್ಲಾ ರಂಗಗಳಲ್ಲಿ ಹಲವು ರೀತಿಯ ಹೋರಾಟಗಳು ನಡೆಯುತ್ತಿರುವುದನ್ನು ನಾವು ಗಮನಿಸುತ್ತ ಬಂದಿದ್ದೇವೆ. ಅವುಗಳು ತಮ್ಮ ಜನಾಂಗದ ಅಥವಾ ತಮ್ಮ ಧ್ಯೇಯ ಧೋರಣೆಗಳಿಗೆ ಬದ್ಧವಾಗಿ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುತ್ತಿರುವುದನ್ನು ಕಾಣಬಹುದು.

ಭಾರತೀಯ ಸಮಾಜ ಜಾತಿ ಆಧಾರಿತವಾದದ್ದು, ಜ್ಯಾತ್ಯಾತೀತ ರಾಷ್ಟ್ರವೆಂದು ಘೋಷಿಸಿಕೊಂಡಿರುವ ಈ ದೇಶದಲ್ಲಿ ಜಾತಿ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿರುವುದು ದುರಂತವೇ ಸರಿ. ಸಂವಿಧಾನ ಬದ್ಧವಾದ

ಕಾನೂನುಗಳು ಕೇವಲ ಪುಸ್ತಕದ ಪುಟಗಳಲ್ಲಿ ಮಾತ್ರವೇ ಹೊರತು ಆಚರಣೆಯಲ್ಲಿ ಇಲ್ಲ. ಸಾಮಾಜಿಕ ಜೀವನದ ಪ್ರತಿ ಹಂತದಲ್ಲಿಯೂ ಜಾತಿ ರಾಜಕಾರಣ ತಾಂಡವಾಡುತ್ತಿರುವುದರಿಂದ ಈ ದೇಶದ ಕೆಳವರ್ಗದ ಜನ ಇವತ್ತಿಗೂ ಸುಧಾರಣೆ ಕಂಡಿಲ್ಲ. ಈ ನಿಟ್ಟಿನಲ್ಲಿ ಹಲವಾರು ಸಮಾಜ ಸುಧಾರಕರು ಜಾತಿಯತೆಯನ್ನು ತೊಲಗಿಸಲು ಪ್ರಯತ್ನಿಸಿ ತಮ್ಮ ತತ್ವ, ಸಿದ್ಧಾಂತಗಳನ್ನು ಈ ನಾಡಿನಲ್ಲಿ ಬಿಟ್ಟು ಹೋಗಿದ್ದಾರೆ. ಅವುಗಳು ಸಹ ಪುಸ್ತಕದ ಪುಟಗಳಲ್ಲಿ ಅಚ್ಚಾಗಿವೆ ಹೊರತು ಆಚರಣೆಯಲ್ಲಿ ಬಂದಿಲ್ಲ. ಆದರೆ ದಲಿತ ಜನರ ಸುಧಾರಣೆಗಾಗಿ ಶ್ರಮಿಸಿದ ಡಾ.ಬಿ.ಆರ್. ಅಂಬೇಡ್ಕರ ಅವರ ವಿಚಾರಧಾರೆಗಳು ಇಂದಿಗೂ ಜೀವಂತವಾಗಿರುವುದು ದಲಿತ ಚಳವಳಿಗಳಿಂದ ಮಾತ್ರ. ಎಲ್ಲಿಯವರೆಗೆ ಈ ದೇಶದಲ್ಲಿ ಶೋಷಣೆ ಇರುತ್ತದೆಯೋ ಅಲ್ಲಿಯವರೆಗೆ ದಲಿತಪರ ಚಿಂತನೆ, ವಿಚಾರಗಳು ಜೀವಂತವಾಗಿರುತ್ತವೆ. ಇಂಥ ಶೋಷಣೆ ವಿರುದ್ಧ ದಲಿತರು ಒಗ್ಗಟ್ಟಾಗಿ ಸಂಘಟನೆ ಮೂಲಕ ಈ ವ್ಯವಸ್ಥೆಯ ವಿರುದ್ಧ ನಿರಂತರವಾಗಿ ಹೋರಾಟ ಮಾಡುತ್ತಿರುವುದು ಹಲವಾರು ಸಂಶೋಧನೆಗಳಿಂದ ಬೆಳಕಿಗೆ ಬಂದಿದೆ. ಈ ನಿಟ್ಟಿನಲ್ಲಿ ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ದಲಿತ ಚಳವಳಿ ನಡೆದಿದ್ದು ಅವುಗಳು ದಾಖಲಾಗುತ್ತಿವೆ. ಅದೇ ರೀತಿ ಬಾಗಲಕೋಟೆ ಜಿಲ್ಲೆಯಲ್ಲಿಯೂ ದಲಿತ ಚಳವಳಿಗಳು ನಡೆದಿದ್ದು ಅವು ದಾಖಲೆಗೊಂಡಿಲ್ಲದಿರುವುದರಿಂದ ಈ ಅಧ್ಯಯನವನ್ನು ಕೈಗೊಂಡು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ.

ಪ್ರಸ್ತಾವನೆಯಲ್ಲಿರುವ ಅಧ್ಯಯನದ ಮೊದಲನೇ ಭಾಗವು, ಬಾಗಲಕೋಟೆ ಜಿಲ್ಲೆಯ ಸಾಮಾಜಿಕ ಸ್ಥಿತಿಗತಿಗಳ, ವ್ಯವಸ್ಥೆಯನ್ನು ಮತ್ತು ಜಿಲ್ಲೆಯ ಭೌಗೋಳಿಕ ಹಿನ್ನೆಲೆ, ಜನಸಂಖ್ಯೆ, ಐತಿಹಾಸಿಕ ಹಿನ್ನೆಲೆ ಕುರಿತು ಚರ್ಚಿಸಲಾಗಿದೆ. ಹಾಗೂ ಅಧ್ಯಯನ ಉದ್ದೇಶ, ವ್ಯಾಪ್ತಿ ಮಹತ್ವ ಮತ್ತು ವಿಧಾನಗಳನ್ನು ಕುರಿತು ಹೇಳಲಾಗಿದೆ. ಇದರ ಜೊತೆಗೆ ಪೊಲೀಸ್, ಕಾನೂನು ವ್ಯವಸ್ಥೆಯ ಬಗ್ಗೆ ವಿವರಣೆ ಕೊಡಲಾಗಿದೆ. ಸರಳ ಹಾಗೂ ವ್ಯವಸ್ಥಿತವಾದ ಅಧ್ಯಯನದ ಮಾದರಿಗಳನ್ನು ಅನುಸರಿಸಿ ಅಧ್ಯಯನದ ವಿನ್ಯಾಸಗಳನ್ನು ತಯಾರಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿಯ ಸ್ಥಿತಿಗತಿ, ದಲಿತ ಚಳವಳಿಯ ಉದಯ ಹಾಗೂ ಬೆಳೆದು ಬಂದ ದಾರಿ, ದಲಿತ ಚಳವಳಿಯ ನಾಯಕರ ಬಗ್ಗೆ ಒಳಗೊಂಡಿದೆ. ಚಳವಳಿಯ ಸ್ಥಿತಿಗತಿ ಬಗೆಗೆ ಮಾಹಿತಿ ಸಂಗ್ರಹಿಸಿ ಅಧ್ಯಯನ ಮಾಡಿ ಇತಿಹಾಸವನ್ನು ತಿಳಿಸುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಮಾಡಲಾಗಿದೆ. ಪ್ರಸ್ತುತ ನಿಬಂಧದಲ್ಲಿ ಕ್ಷೇತ್ರಕಾರ್ಯ ಮಾಡಿ ಮಾಹಿತಿ ಕಲೆಹಾಕಲಾಗಿದೆ. ಹಾಗೂ ದಲಿತ ಚಳವಳಿಯ ಪ್ರಮುಖ ನಾಯಕರ ವಿವರಗಳನ್ನು ಸಂದರ್ಶನ ಮಾಡಿ ವಿಷಯ ಸಂಗ್ರಹಿಸಲಾಗಿದೆ. ಮಾನವನ ಚರಿತ್ರೆ ಸಂಘರ್ಷಮಯ ಚರಿತ್ರೆಯಾಗಿದ್ದು ಶತಮಾನಗಳಿಂದ ದಲಿತರು ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತಲೇ ಬರುತ್ತಿದ್ದಾರೆ. ಈ ನಿಟ್ಟಿನಲ್ಲಿ ಬಾಗಲಕೋಟೆಯಲ್ಲಿ ಅವರ ಹೋರಾಟ, ಸಂಘಟನೆ

ನಿರ್ಮಾಣ, ಹೋರಾಟದ ಉನ್ನತ ಕಾಲ, ವಿಘಟನೆ ಕಾಲ, ಸದ್ಯದ ಪರಿಸ್ಥಿತಿಯ ಬಗೆಗೆ ವಿವರಿಸಲಾಗಿದೆ. ಇಂಥ ಹೋರಾಟಗಳು ಇನ್ನಷ್ಟು ಬಲಗೊಂಡು ದಲಿತ ಜನಾಂಗಕ್ಕೆ ಸಿಗಬೇಕಾದ ಎಲ್ಲಾ ಹಕ್ಕುಗಳು ದೊರೆಯಲಿ ಎಂಬುದೇ ಈ ಅಧ್ಯನಯದ ಆಶಯವಾಗಿದೆ.

ಮೂರನೇ ಅಧ್ಯಯನದ ಭಾಗವು ದಲಿತ ಚಳವಳಿಯ ಸ್ವರೂಪದ ಬಗ್ಗೆ ಸಂಕ್ಷಿಪ್ತವಾಗಿ ವಿವರಗಳನ್ನು ನೀಡಲು ಪ್ರಯತ್ನಿಸಲಾಗಿದೆ. ಚಳವಳಿಯ ಸ್ವರೂಪಗಳಾದ ಭೂಮಿ, ನೀರು, ಸಾಮಾಜಿಕ ನ್ಯಾಯ, ರಾಜಕೀಯ ನ್ಯಾಯ ಮುಂತಾದವುಗಳ ಬಗೆಗೆ ವಿವರಣೆ ನೀಡಲಾಗಿದೆ. ದಲಿತ ಸಂಘಟನೆಗಳು ಭೂಮಿಗಾಗಿ ಹೋರಾಡಿದ ಅನೇಕ ಘಟನೆಗಳ ಕುರಿತು ಚರ್ಚಿಸಲಾಗಿದೆ. ಹಾಗೂ ಬಾಗಲಕೋಟೆಯ ಹೋರಾಟಗಳನ್ನು ಇಲ್ಲಿ ದಾಖಲಿಸಲಾಗಿದೆ. ಜಿಲ್ಲೆಯಲ್ಲಿ ನೀರಿಗಾಗಿ ದಲಿತರು ಹೋರಾಡಿದ ಸಂದರ್ಭಗಳನ್ನು ವಿವರಿಸಲಾಗಿದೆ. ದಲಿತರಿಗೆ ಸಾಮಾಜಿಕ ನ್ಯಾಯ ಸಿಗುವಲ್ಲಿ ಯಾವ ರೀತಿ ಅಡೆತಡೆಗಳಿವೆ, ಸಮಸ್ಯೆಗಳಿವೆ ಹಾಗೂ ಜಿಲ್ಲೆಯ ದೇವದಾಸಿ ಪದ್ಧತಿ, ನೀರು ಓಕಳಿಗಳಂಥ ಅನಿಷ್ಟ ಪದ್ಧತಿಗಳ ಬಗ್ಗೆ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಶೋಷಿತರು ಈ ದೇಶವನ್ನು ಆಳಬೇಕೆಂಬುದು ಡಾ.ಬಿ.ಆರ್. ಅಂಬೇಡ್ಕರ ಅವರ ಕನಸಾಗಿತ್ತು. ಆ ನಿಟ್ಟಿನಲ್ಲಿ ದಲಿತ ಸಂಘಟನೆಗಳು ರಾಜಕೀಯ ಪ್ರವೇಶ ಮಾಡಿದ್ದು ಮತ್ತು ಅದರ ಪರಿಣಾಮ, ಹಾಗೂ ರಾಜಕೀಯ ಮುಖಂಡರ ಧೋರಣೆಗಳು ಹೇಗಿವೆ. ಮೀಸಲಾತಿ ಕ್ಷೇತ್ರದಿಂದ ಗೆದ್ದು ಹೋದ ದಲಿತ ರಾಜಕಾರಣಿಗಳು ದಲಿತರಿಗಾಗಿ ಏನು ಮಾಡಿದ್ದಾರೆ ಅವರ ಕಾರ್ಯವೈಖರಿ ಏನು ಎಂಬುದರ ಬಗೆಗೆ ಈ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಅಧ್ಯಾಯದ ನಾಲ್ಕನೇ ಭಾಗವು ಸಮಕಾಲೀನ ಸಂದರ್ಭದಲ್ಲಿ ದಲಿತ ಚಳವಳಿ ಕುರಿತು ಚರ್ಚಿಸಲಾಗಿದೆ. ಜಾಗತೀಕರಣ, ಖಾಸಗೀಕರಣ ಸಂದರ್ಭದಲ್ಲಿ ಕಂಡುಬರುತ್ತಿರುವ ದಲಿತ ಚಳವಳಿಗಳು ಯಾವ ಮಟ್ಟದಲ್ಲಿವೆ, ಅವುಗಳ ಚಟುವಟಿಕೆಗಳ ಸ್ವರೂಪ ಏನು? ಎಂಬುದನ್ನು ಚರ್ಚಿಸಲಾಗಿದೆ. ಹಾಗೂ ದಲಿತ ಸಂಘರ್ಷ ಸಮಿತಿಯಲ್ಲಿನ ದ್ವಂದ್ವ, ರಾಜಕೀಯ ಪ್ರವೇಶದ ಬಗ್ಗೆ ಕಾರ್ಯಕರ್ತರಲ್ಲಿನ ಭಿನ್ನಾಭಿಪ್ರಾಯ ಮೀಸಲಾತಿ ಒಳಮೀಸಲಾತಿಗೆ ಸಂಬಂಧಪಟ್ಟ ವೈಮನಸ್ಸು ಇಂಥ ವಿಚಾರಗಳನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಪ್ರದೇಶದ ಸ್ಥಳೀಯ ನಾಯಕರ ರಾಜಕೀಯ ಸ್ಥಾನಮಾನ, ಅವುಗಳಿಗಿರುವ ನಿರ್ಬಂಧಗಳು, ಮೇಲ್ವರ್ಗದವರ ಹಿಡಿತ, ದಲಿತ ಪತ್ರಿಕೆಗಳು ಅವುಗಳ ಕಾರ್ಯ, ಉದ್ದೇಶಗಳೇನು ಎಂಬುದರ ಬಗೆಗೆ ವಿವರ ನೀಡುವ ಪ್ರಯತ್ನ ಪ್ರಸ್ತುತ ಸಂಪ್ರಬಂಧದಲ್ಲಿ ಮಾಡಲಾಗಿದೆ.

ಪ್ರಸ್ತುತ ಸಂಪ್ರಬಂಧದ ಕೇಂದ್ರಬಿಂದುವಾಗಿರುವುದು ಬಾಗಲಕೋಟೆ ಜಿಲ್ಲೆಯಲ್ಲಿನ ದಲಿತ ಚಳವಳಿ. ಈ ಸಂಶೋಧನೆಯಲ್ಲಿ ಕಂಡುಕೊಂಡ ಫಲಿತಗಳೆಂದರೆ ಬಸವಣ್ಣನ ಕಾಲದಿಂದಲೂ ಇಲ್ಲಿನ ದಲಿತರಿಗೆ ಜಾಗೃತಿ ಮೂಡಿಸುವ ಕಾರ್ಯ ನಡೆದಿದ್ದರು ದಲಿತರ ಇದುವರೆಗೂ ಸುಧಾರಿಸಿಲ್ಲ. ಡಾ.ಬಿ.ಆರ್.

ಅಂಬೇಡ್ಕರ್ ಆದಿಯಾಗಿ ಎಷ್ಟೋ ಮಹನೀಯರು ಈ ಪ್ರದೇಶಕ್ಕೆ ಬಂದು ದಲಿತ ಜನಾಂಗದವರಲ್ಲಿ ಶೋಷಕರ ವಿರುದ್ಧ ಹೋರಾಡುವ ಮನೋಭಾವ ಬೆಳೆಸಿದರೂ ಅದು ಫಲಕೊಟ್ಟದ್ದು ಎಂಭತ್ತರ ದಶಕದಲ್ಲಿ, ಅಲ್ಲಿಯವರೆಗೆ ಈ ಪ್ರದೇಶದಲ್ಲಿ ಚಳವಳಿಯ ಕಾವು ಇತ್ತು. ಆದರೆ ಸಂಘಟನೆ ರೂಪದಲ್ಲಿ ಇರಲಿಲ್ಲ. ದಲಿತರೆಲ್ಲರೂ ಒಗ್ಗಟ್ಟಾಗಿ ಸಂಘಟನೆ ಮಾಡಿಕೊಂಡು ಹೋರಾಟಗಳನ್ನು ಪ್ರಾರಂಭಿಸಿದುದು ಎಂಭತ್ತರ ದಶಕದ ಕೊನೆಯಲ್ಲಿ, ದಲಿತ ಸಂಘಟನೆಗಳು ಈ ಭಾಗದ ದಲಿತರ ಒಡಲಾಳದ ಕೂಗಾಗಿ ಇವತ್ತಿಗೂ ಹೋರಾಡುತ್ತಿರುವುದನ್ನು ಪ್ರಸ್ತುತ ಸಂಪ್ರಬಂಧದಲ್ಲಿ ಕಾಣಬಹುದಾಗಿದೆ. ಕ್ಷೇತ್ರಕಾರ್ಯಗಳ ಆಕರ ಸಾಮಗ್ರಿಗಳ ಆಧಾರದೊಂದಿಗೆ ಹಾಗೂ ಜ್ಞಾನದ ಪರಿಮಿತಿಯಲ್ಲಿ ಸಂಶೋಧನೆಯನ್ನು ಪೂರ್ಣಗೊಳಿಸಲಾಗಿದೆ. ಈ ಸಂಶೋಧನೆಯು ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿ ಮತ್ತು ಅದರ ಕಾರ್ಯಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವಾಗಿದೆ.

* * *

# ಅನುಬಂಧ

೧. ಆಯ್ದ ಪರಾಮರ್ಶನ ಗ್ರಂಥಗಳು

೨. ಲೇಖನಗಳು

೩. ನಿಯತಕಾಲಿಕೆಗಳು

೪. ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಗಳ ದಲಿತ ಸಾಹಿತಿಗಳ ಪರಿಚಯ

೫. ನಕ್ಷೆಗಳು

# ೧. ಆಯ್ದ ಪರಾಮರ್ಶನ ಗ್ರಂಥಗಳು


೦೧. ಅರ್ಜುನ ಗೊಳಸಂಗಿ., (ಸಂ), (೨೦೦೩), ಕನ್ನಡ ದಲಿತ ಸಾಹಿತ್ಯ ಸಮಾಲೋಕನ, ಬೆಂಗಳೂರು; ಕರ್ನಾಟಕ ಸಾಹಿತ್ಯ ಅಕಾಡೆಮಿ.

೦೨. ಅಗ್ರಹಾರ ಕೃಷ್ಣಮೂರ್ತಿ, (ಸಂ)., (೨೦೦೬), ಸಂಸ್ಕೃತಿ ಕಥನ, ಬೆಂಗಳೂರು; ಕನ್ನಡ ಮತ್ತು ಸಂಸ್ಕೃತಿ ಇಲಾಖೆ

೦೩. ಅರ್ಜುನ ಗೊಳಸಂಗಿ., (ಸಂ), (೨೦೦೫) ಹುಸಿ ಇಲ್ಲದ ಗೂಡಿನೊಳಗೆ, ಗದಗ; ದಲಿತ ಸಾಹಿತ್ಯ ಪರಿಷತ್ತು ರಾಜ್ಯ ಘಟಕ.

೦೪. ಅರ್ಜುನ ಗೋಳಸಂಗಿ, (ಸಂ)., (೨೦೦೦), ದಲಿತಜ್ಞ, ಗದಗ; ದಲಿತ ಸಾಹಿತ್ಯ ಪರಿಷತ್ತು.

೦೫. ಅರವಿಂದ ಮಾಲಗತ್ತಿ., (ಸಂ)., (೧೯೯೧), ಡಾ. ಅಂಬೇಡ್ಕರ್ ವಿಚಾರಧಾರೆ, ಬೆಂಗಳೂರು; ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೦೬. ಅರವಿಂದ ಮಾಲಗತ್ತಿ., (ಸಂ), (೨೦೦೨) ದಲಿತ ಮಾರ್ಗ, ಬೆಂಗಳೂರು; ಕನ್ನಡ ಪುಸ್ತಕ ಪ್ರಾಧಿಕಾರ.

೦೭. ಉಮಾದೇವಿ ಪಾಟೀಲ., (೨೦೦೭) ಪ್ರೊ.ಬಿ. ಕೃಷ್ಣಪ್ಪ ದಲಿತ ಚಿಂತನೆಗಳ ವಿಶ್ಲೇಷಣೆ, ಹಂಪಿ; ಕನ್ನಡ ವಿಶ್ವವಿದ್ಯಾಲಯ.

೦೮. ಕೃಷ್ಣಪ್ಪ. ಬಿ., (೨೦೦೦) 'ಚಳವಳಿಗಳು ಮತ್ತು ಬರಹಗಳು', ಬೆಂಗಳೂರು; ಪ್ರೊ.ಬಿ. ಕೃಷ್ಣಪ್ಪ ಟ್ರಸ್ಟ್.

೦೯. ಗಂಗಾರಾಂ ಬಂಡಾಳ., (೧೯೯೨) ಕರ್ನಾಟಕ ದಲಿತ ಚಳವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್, ಕೋಲಾರ; ಚೈತ್ರ ಪ್ರಕಾಶನ.

೧೦. ಚಂದ್ರಶೇಖರ್ ಟಿ.ಆರ್., (ಸಂ)., (೨೦೦೫) ದಲಿತ ಅಧ್ಯಯನ, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೧೧. ಚಾಂಡಾಳ ಗಂಗಾರಮ, (೧೯೯೯), ಸಾಂಕೇತಿಕ, ಚಿಕ್ಕ ತಿರುಪತಿ; ಚೈತ್ರ ಪ್ರಕಾಶನ.

೧೨. ಚಿನ್ನಸ್ವಾಮಿ ಸೋಸಲೆ ಎನ್., (೨೦೦೬) ಪ್ರಭುತ್ವ ಮತ್ತು ದಲಿತರು, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು.

೧೩. ಚಿನ್ನಸ್ವಾಮಿ ಸೋಸಲೆ ಎನ್., (೨೦೦೪) ಸಾಮ್ರಾಜ್ಯ ಮತ್ತು ಸಂಸ್ಥಾನ, ಹಂಪಿ; ಕನ್ನಡ ವಿಶ್ವವಿದ್ಯಾಲಯ.

೧೪. ಚಿನ್ನಸ್ವಾಮಿ ಸೋಸಲೆ ಎನ್., (೨೦೦೮), ಭಾರತೀಯ ಸಮಾಜ ಮತ್ತು ದಲಿತರು, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೫. ಚಿನ್ನಸ್ವಾಮಿ ಸೋಸಲೆ ಎನ್., (೨೦೦೬) ದಲಿತರ ಮೇಲೆ ದೌರ್ಜನ್ಯ ಒದು ನೋಟ, ಹಂಪಿ; ಕನ್ನಡ ವಿಶ್ವವಿದ್ಯಾಲಯ. ಚಿನ್ನಸ್ವಾಮಿ ಸೋಸಲೆ ಎನ್., (೨೦೦೪), ನಮ್ಮ ಗ್ರಾಮಗಳು ಅಂದು ಇಂದು, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೧೬. ಚಿನ್ನಸ್ವಾಮಿ ಸೋಸಲೆ ಎನ್., (೨೦೦೪), ನಮ್ಮ ಗ್ರಾಮಗಳು ಅಂದು ಇಂದು, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೭. ಜವರಯ್ಯ ಮ.ನ., (೧೯೯೫), ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ಮೈಸೂರು; ಸಿದ್ಧಾರ್ಥ ಗ್ರಂಥಮಾಲೆ.

೧೮. ದಯಾನಂದ ಮಾನೆ., (೨೦೦೧), ದಲಿತ ಚಳವಳಿ-೧, (ವಿಜಯ್ ಪೂಣಚ್ಚ ತಂಬಂಡ, ಸಂಪುಟ ೪, ಚರಿತ್ರೆ ವಿಶ್ವಕೋಶ), ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

೧೯. ದಯಾನಂದ ಮಾನೆ., (೨೦೦೭), ಬಾಬಾಸಾಹೇಬ ಅಂಬೇಡ್ಕರ್ ಮತ್ತು ದಲಿತ ಚಳವಳಿ, ಮೈಸೂರು; ಪ್ರಕಾಶಕರು, ಡಾ.ಬಿ.ಆರ್. ಅಂಬೇಡ್ಕರ್ ರೀಸರ್ಚ್ ಅಕಾಡೆಮಿ.

೨೦. ದಾಸನೂರು ಕೂಸಣ್ಣ., (೨೦೦೫) ರೈತರ ಆತ್ಮಹತ್ಯೆ ಮತ್ತು ದಲಿತ ನವಬ್ರಾಹ್ಮಣಿಕೆ?, ಮೈಸರು; ಮಾತಂಗ ಪ್ರಕಾಶನ.

೨೧. ಪುಟ್ಟಯ್ಯ ಬಿ.ಎಂ. (೨೦೦೮) ದಲಿತರು ಮತ್ತು ಭೂಮಿಯ ಪ್ರಶ್ನೆ, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

೨೨. ನಾಗರಾಜ್ ಎಂ.ಜಿ.,( ೨೦೦೬), ಕರ್ನಾಟಕ ರೈತ ಚಳವಳಿ ಸತ್ಯಾಗ್ರಹಗಳು, ಸಂಪುಟ-೨ ಬೆಂಗಳೂರು; ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ ವಿಧಾನಸೌಧ.

೨೩. ಪುಟ್ಟಯ್ಯ ಬಿ.ಎಂ., (೨೦೦೮) ಮುಖಾಮುಖಿ ಸಮಾಜ ಸಂಸ್ಕೃತಿ ಚಳುವಳಿ, ಹೊಸಪೇಟೆ; ಸಿದ್ಧಾರ್ಥ ಪ್ರಕಾಶನ.

೨೪. ಪುರುಷೋತ್ತಮ ಬಿಳಿಮಲೆ., (೧೯೯೦), ಬಂಡಾಯ ದಲಿತ ಸಾಹಿತ್ಯ, ಬೆಂಗಳೂರು; ಕರ್ನಾಟಕ ಸಾಹಿತ್ಯ ಅಕಾಡೆಮಿ.

೨೫. ಪೋತೆ ಎಚ್.ಟಿ., (೨೦೦೭), ಅಂಬೇಡ್ಕರ ಸಂವೇದನೆ, ಗುಲ್ಬರ್ಗಾ; ಕುಟುಂಬ ಪ್ರಕಾಶನ

೨೬. ಪೋತೆ ಎಚ್.ಟಿ. ಸಿಂಧೆ ಜಗನ್ನಾಥ, (ಸಂ), (೨೦೦೬) ಮೀಸಲಾತಿ ಸಮಸ್ಯೆ ಸವಾಲುಗಳು, ಗುಲ್ಬರ್ಗಾ; ತಿಪ್ಪಣ್ಣಂಬು ಪ್ರಕಾಶನ.

೨೭. ಪೋತೆ ಎಚ್.ಟಿ. (ಸಂ)., (೨೦೦೪), ದಲಿತಾಂತರಂಗ, ಗುಲ್ಬರ್ಗಾ; ತಿಪ್ಪಣ್ಣಂಬು ಪ್ರಕಾಶನ.

೨೮. ಪೋತೆ ಎಚ್.ಟಿ., (೨೦೦೮) ದಲಿತ ಸಾಹಿತಿ ಕುಮಾರ ಕಕ್ಕಯ್ಯ ಪೋಳ, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ.

೨೯. ಪೋತೆ ಎಚ್.ಟಿ., ಜಗನ್ನಾಥ ಸಿಂಧೆ., (೨೦೦೫)., ಬಿ. ಶ್ಯಾಮಸುಂದರ, ಗುಲ್ಬರ್ಗಾ; ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ.

೩೦. ಭಂಡಾರಿ ಆರ್.ವಿ., (೨೦೦೩), ವರ್ಣದಿಂದ ವರ್ಗದ ಕಡೆಗೆ, ಬೆಂಗಳೂರು; ಕನ್ನಡ ಪುಸ್ತಕ ಪ್ರಾಧಿಕಾರ.

೩೧. ಮಹಾದೇವಯ್ಯ ಪಿ., (೨೦೦೫), ದಲಿತರು ಮತ್ತು ಪರ್ಯಾಯ ರಾಜಕಾರಣ, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೩೨. ಮಹಾದೇವಯ್ಯ ಪಿ., (ಸಂ) (೨೦೦೬) ದಲಿತರು ಭಾಷೆ ಮತ್ತು ಸಮಾಜ, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವದ್ಯಾಲಯ.

೩೩. ಮುನಿವೆಂಕಟಪ್ಪ ವಿ. (೧೯೯೮), ದಲಿತ ಚಳವಳಿ ಒಂದು ಅವಲೋಕನ, ಮೈಸೂರು; ವಿಚಾರವಾದಿ ಪ್ರಕಾಶನ.

೩೪. ಮೊಗಳ್ಳಿ ಗಣೇಶ., (೨೦೦೬) ದಲಿತ ಕಥನ, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೩೫. ಮೊಗಳ್ಳಿ ಗಣೇಶ., (೧೯೯೯), ದಲಿತರು ಮತ್ತು ಜಾಗತೀಕರಣ, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೩೬. ಲಕ್ಷ್ಮಣ್ ತೆಲಗಾವಿ, (೧೯೯೭), ಹಿಂದುಳಿದ ವರ್ಗಗಗಳು ಮತ್ತು ದಲಿತ ಚಳವಳಿಗಳು, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೩೭. ವೀರಯ್ಯ ಡಿ.ಎಸ್., (೨೦೦೫), ದಲಿತ ಚಿಂತನೆ ವೈಚಾರಿಕ ಲೇಖನಗಳ ಸಂಕಲನ, ಬೆಂಗಳೂರು; ಸಪ್ನ ಬುಕ್ ಹೌಸ್.

೩೮. ವಿರೂಪಾಕ್ಷಿ ಪೂಜಾರಹಳ್ಳಿ., (ಸಂ), (೨೦೦೫), ದಲಿತರು ಮತ್ತು ಚರಿತ್ರೆ, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೩೯. ವಿಠ್ಠಲ ಮೂರ್ತಿ ಆರ್.ಟಿ., (೨೦೦೫), ದಲಿತ ಚಳವಳಿಯ ನಾಳೆಗಳು, ಬೆಂಗಳೂರು; ಪ್ರಭೆ ಪ್ರಕಾಶನ.

೪೦. ಶರ್ಮ ಆರ್.ಎನ್. (ಮೂಲ)., (೨೦೦೧), ಪ್ರಾಚೀನ ಭಾರತ, ಅನುಶಂಕರ ನಾರಾಯಣ ರಾವ್, ಎನ್.ಪಿ. ಬೆಂಗಳೂರು; ನವಕರ್ನಾಟಕ ಪ್ರಕಾಶನ.

೪೧. ಶರ್ಮ ಆರ್.ಎನ್. (ಮೂಲ)., (೨೦೦೬), ಪ್ರಾಚೀನ ಭಾರತದಲ್ಲಿ ಶೂದ್ರರು, (ಅನುಃ ಶ್ರೀನಿವಾಸ ಮೂರ್ತಿ, ಜೆ. ಶೋಭಾ, ಆರ್. ಗುರುದತ್, ಎಸ್. ರಾಮಕೃಷ್ಣ) ಬೆಂಗಳೂರು; ನವಕರ್ನಾಟ ಪ್ರಕಾಶನ

೪೨. ಶೈಲಜ ಹಿರೇಮಠ., (೨೦೦೩)., ಸ್ತ್ರೀ ಕಥನ, ಹೊಸಪೇಟೆ; ಭವನ ಪ್ರಕಾಶನ.

೪೩. ಶ್ರೀಧರ ಎ., (೨೦೦೬), ಪಂಚಾಯತ್ ಸಂಸ್ಥೆಯ ಸಾಮಾಜಿಕ ಆಯಾಮಗಳು, (ಮಂಟಪ ಮಾಲೆ ೧೩೫) ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

೪೪. ಶ್ಯಾಮ ಸುಂದರ, ಬಿ.ಮೂಲ., (೨೦೦೫), ಚೆಂದವರು, ಅನು ಪೋತೆ ಎಚ್.ಟಿ. ಸಿಂಧೆ, ಜಗನ್ನಾಥ, ಆರ್. ಗುಲ್ಬರ್ಗಾ; ತಿಪ್ಪಣ್ಣಂಬು ಪ್ರಕಾಶನ.

೪೫. ಸರ್ದೇಸಾಯಿ ಎಸ್.ಜಿ., (೧೯೯೦), ಗ್ರಾಮೀಣ ಪ್ರದೇಶಗಳಲ್ಲಿ ವರ್ಗಸಂಘರ್ಷ ಮತ್ತು ಜಾತಿ ವೈಷಮ್ಯ, ಬೆಂಗಳೂರು; ನವ ಕರ್ನಾಟಕ ಪಬ್ಲಿಕೇಷನ್.

೪೬. ಹನುಮಂತಯ್ಯ ಎಲ್., (೧೯೯೩), ಅಂಬೇಡ್ಕರ್ ಮತ್ತು ಸಮಕಾಲೀನತೆ, ಬೆಂಗಳೂರು; ವಾಹಿನಿ ಪ್ರಕಾಶನ.

೪೭. ಹನುಮಂತಯ್ಯ ಎಲ್., (೧೯೯೦), ದಲಿತ ಲೋಕದ ಒಳಗೆ, ಬೆಂಗಳೂರು; ಕರ್ನಾಟಕ ದಲಿತ ಪ್ರಕಾಶನ.

೪೮. ಹಿರೇಮಠ ಎಸ್.ಎಸ್., (೨೦೦೫), ಸಮಾಜ ಸಂಸ್ಕೃತಿ ಸಂಘರ್ಷ, ಬೆಂಗಳೂರು; ಸಿವಿಜಿ ಪಬ್ಲಿಕೇಷನ್ಸ್

ಇಂಗ್ಲಿಷ್ ಗ್ರಂಥಗಳು

೦೧. ಕಾಡೇ ತೋಟದ ಎನ್.ಕೆ., (೧೯೭೭), ರಿಲಿಜನ್ ಆಯಂಡ್ ಸೊಸೈಟಿ ಅಮಾಂಗ್ ದಿ ಹರಿಜನ್ಸ್, ಧಾರವಾಡ; ಕರ್ನಾಟಕ ಯೂನಿವರ್ಸಿಟಿ.

೦೨. ಘನ್‌ಶ್ಯಾಮ್ ಷಾ., (೧೯೯೦), ಸೋಸಿಯಲ್ ಮೂವೆಂಟ್ಸ್ ಇನ್ ಇಂಡಿಯಾ, ನ್ಯೂದೆಹಲಿ; ಸಾಗೆ ಪಬ್ಲಿಕೇಷನ್.

೦೩. ಪೀಟರ್‌ರಾಬ್., (೧೯೯೩), ದಲಿತ ಮೂವೆಂಟ್ಸ್ ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್.

೦೪. ಮಮತಾ ರಾಜಿವತ್., (೨೦೦೫), ಹಿಸ್ಟರಿ ಆಫ್ ದಲಿತ, ಅ್ಯನಮಲ್ ಪಬ್ಲಿಕೇಷನ್ಸ್ ಪಿವಿಟಿ, ಎಲ್‌ಟಿಡಿ.

೦೫. ಮೈಕಲ್ ಎಸ್.ಎಮ್. (ಎಡಿಟರ್), (೧೯೯೯), ದಲಿತ್ಸ್ ಇನ್ ಮಾರ್ಡನ್ ಇಂಡಿಯಾ, ವಿಜನಲ್ ಆ್ಯಂಡ್ ವ್ಯಾಲ್ಯುಂ, ನ್ಯೂ ದೆಹಲಿ; ವಿಸ್ತಾರ್ ಪಬ್ಲಿಕೇಶನ್ಸ್.

## ೨. ಲೇಖನಗಳು

೧. ಸನತ್ ಕುಮಾರ ಬೆಳಗಲಿ., (ಸೆಪ್ಟೆಂಬರ್ ೨೦೦೩), ಸಮಕಾಲೀನ ಒತ್ತಡಗಳು ಮತ್ತು ದಲಿತರ ಹಕ್ಕುಗಳು, (ಸಂವಾದ, ಮಾಸಿಕ, ಸಂ; ಇಂದೂಧರ ಹೊನ್ನಾಪುರ)

೨. ರಾಜಶೇಖರ್ ವಿ.ಟಿ., (ಜನವರಿ ೧೯೯೭), ದಲಿತ ಸಂಘರ್ಷ ಸಮಿತಿಯೊಳಗೆ ಸಂಘರ್ಷ: ವೈದಿಕ ಪಿತೂರಿಗಳಿಗೆ ದಲಿತ ಸಂಘಟನೆಯು ಬಲಿಯಾಗುತ್ತಿದೆಯೇ?, (ದಲಿತ ವಾಯ್ಸ್, ಮಾಸಿಕ, ಸಂ; ವಿ.ಟಿ.ರಾಜಶೇಖರ್) ಸಂಪುಟ-೩, ಸಂಚಿಕೆ-೧

೩. ಜನಾರ್ದನ ಎರ್ಪಕಟ್ಟೆ., (ಫೆಬ್ರವರಿ ೧೯೯೭), ದಲಿತ ಪ್ರಪಂಚ ಮತ್ತು ಸಾಹಿತ್ಯಾನುಭವ, (ಸಂಕ್ರಮಣ, ಮಾಸಿಕ, ಸಂ; ಚಂದ್ರಶೇಖರ ಪಾಟೀಲ) ಸಂಪುಟ-೩೨, ಸಂಚಿಕೆ-೨

೪. ತಿಪ್ಪೇಸ್ವಾಮಿ ಪಿ.ಆರ್., (ಅಕ್ಟೋಬರ್ ೧೯೮೧-೮೨), ಕರ್ನಾಟಕ ಗಾಂಧಿ ಪಂಚಮರ ಗೋಪಾಲಸ್ವಾಮಿ, (ಸಂಕ್ರಮಣ, ಮಾಸಿಕ, ಸಂ; ಚಂದ್ರಶೇಖರ ಪಾಟೀಲ)

೫. ಪ್ರಕಾಶ್ ಕಮ್ಮರಡಿ ಟಿ.ಪಿ., (೧೯೮೯-೯೦), ಅಂಬೇಡ್ಕರ್ ಮತ್ತು ಭೂಸಂಬಂಧ ಪ್ರಶ್ನೆಗಳು, (ಶೂದ್ರ, ಮಾಸಿಕ, ಸಂ; ಶೂದ್ರ ಶ್ರೀನಿವಾಸ) ಸಂಪುಟ-೧೬, ಸಂಚಿಕೆ, ೬-೭

೬. ಅರವಿಂದ ಮಾಲಗತ್ತಿ., (೧೯೯೦-೯೧), ಬಂಡಾಯ ಸಾಹಿತ್ಯ ಚಳವಳಿ ಮತ್ತು ದಲಿತರು, (ಶೂದ್ರ, ಮಾಸಿಕ, ಸಂ; ಶೂದ್ರ ಶ್ರೀನಿವಾಸ) ಸಂಪುಟ-೨೪, ಸಂಚಿಕೆ-೮

## ೩. ನಿಯತಕಾಲಿಕೆಗಳು

೧. ಸಂಕ್ರಮಣ

೨. ಅರಿವು ಬರಹ

೩. ಶೂದ್ರ

೪. ಸಂವಾದ

೫. ದಲಿತ ವಾಯ್ಸ್

೬. ರುಜುವಾತು

೭. ಪ್ರಜಾವಾಣಿ ದಿನಪತ್ರಿಕೆ

೮. ಡೆಕನ್ ಹೆರಾಲ್ಡ್

೯. ಸಂಯುಕ್ತ ಕರ್ನಾಟಕ ದಿನಪತ್ರಿಕೆ

೧೦. ವಿಜಯ ಕರ್ನಾಟಕ ದಿನಪತ್ರಿಕೆ

೧೧. ವೀರವಾಣಿ

೧೨. ಕುರುಕ್ಷೇತ್ರ

೧೩. ಕರ್ನಾಟಕ ಟೈಮ್ಸ್

೧೪. ರಾಜಮಾಗ ಪತ್ರಿಕೆ

೧೫. ಸಂಘರ್ಷ

೧೬. ದಲಿತ ಲೋಕ

೧೭. ಅಂಬೇಡ್ಕರ್ ವಾಯ್ಸ್

೧೮. ಲೋಕದರ್ಶನ ಪತ್ರಿಕೆ

೧೯. ಕನ್ನಡಮ್ಮ ದಿನಪತ್ರಿಕೆ

೨೦. ಹೊನ್ನಾರು

೨೧. ಕನ್ನಡ ಪ್ರಭ

೨೨. ಲಂಕೇಶ್ ಪತ್ರಿಕೆ

**ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

೧. ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು: ಚಾರಿತ್ರಿಕ ಅಧ್ಯಯನ, ರಾಜಕುಮಾರ್.ಕೆ., ಚರಿತ್ರೆ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨. ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳವಳಿ ಮತ್ತು ಸಾಹಿತ್ಯ., ವೆಂಕಟೇಶ ಮೂರ್ತಿ, ಭಾಷಾಂತರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩. ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಅಂಬೇಡ್ಕರ ಪ್ರಭಾವ, ಅನುಸೂಯಾ ಕಾಂಬಳೆ, ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೨

**ಅಪ್ರಕಟಿತ ಎಂ.ಫಿಲ್ ನಿಬಂಧಗಳು**

೧. ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳು, ಶಶಿಕಾಂತ ಬಿಲ್ಲವ, ಚರಿತ್ರೆ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೨. ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ, ಇಬ್ರಾಹಿಂ ಸಾಬ್, ಚರಿತ್ರೆ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬-೦೭

೩. ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಒಂದು ಅಧ್ಯಯನ, ಸ್ವಾಮಿ.ಕೆ.ಎಸ್., ಚರಿತ್ರೆ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

**ಸಂದರ್ಶನಗಳು**

೧. ಶಾಮ ಘಾಟಗೆ ೨೮.೦೭.೨೦೦೯

೨. ಪರಶುರಾಮ ನೀಲನಾಯ್ಕ ೨೬.೦೭.೨೦೦೯

೩. ರಾಜು ಮೇಲಿನಕೇರಿ ೨೫.೦೭.೨೦೦೯

೪. ಎಚ್.ಟಿ.ಪೋತೆ ೦೪.೦೮.೨೦೦೯

೫. ಅಭಿಷೇಕ ಚಕ್ರವರ್ತಿ ೩೦.೦೭.೨೦೦೯

## ೪. ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಗಳ ದಲಿತ ಸಾಹಿತಿಗಳ ಪರಿಚಯ

### ೧. ಅರವಿಂದ ಮಾಲಗತ್ತಿ

ಅರವಿಂದ ಮಾಲಗತ್ತಿ ಅವರು ಕರ್ನಾಟಕ ಕಂಡ ಖ್ಯಾತ ದಲಿತ ಸಾಹಿತಿಗಳು. ಯಲ್ಲಪ್ಪ ಮತ್ತು ಬಸವ್ವ ದಂಪತಿಗಳ ಮಗನಾಗಿ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳದಲ್ಲಿ ೧.೮.೧೯೫೬ರಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣದಿಂದ ಕಾಲೇಜು ಶಿಕ್ಷಣದವರೆಗೆ ಎಂ.ಜಿ.ವ್ಹಿ.ಸಿ. ಕಾಲೇಜು, ಮುದ್ದೇಬಿಹಾಳದಲ್ಲಿ ಮುಗಿಸಿದರು. ೧೯೭೮ ೧೯೮೦ರಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ಪ್ರಥಮ ದರ್ಜೆಯಲ್ಲಿ ತೇರ್ಗಡೆ ಮಾಡಿದರು. ೧೯೮೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪದವಿ ಪಡೆದರು. ಅಷ್ಟೇ ಅಲ್ಲದೆ ಆ ಪ್ರಬಂಧಕ್ಕೆ ವಿಶ್ವವಿದ್ಯಾಲಯದಿಂದ ಚಿನ್ನದ ಪದಕ ಪಡೆದರು. ಕರ್ನಾಟಕ ರಾಜ್ಯ ಕಂಡ ದಲಿತ ಸಾಹಿತಿಗಳ ಅಗ್ರ ಪಂಕ್ತಿಯಲ್ಲಿ ಅರವಿಂದ ಮಾಲಗತ್ತಿ ಸೇರುತ್ತಾರೆ. ಇವರು ಬರೆದ ಅನೇಕ ಕೃತಿಗಳು ಅವರಿಗೆ ಸಂದ ಪ್ರಶಸ್ತಿಗಳು ಅವರ ಹೆಗ್ಗಳಿಕೆಯನ್ನು ಹೆಚ್ಚಿಸಿವೆ. ಇವರು ಬಿಜಾಪುರದವರಾಗಿದ್ದ ಜಿಲ್ಲೆಯ ದಲಿತರಿಗೆ ಹೆಮ್ಮೆ ವಿಷಯವಾಗಿದೆ.

**ಕೃತಿಗಳು:** ಮೂಕನಿಗೆ ಬಾಯಿ ಬಂದಾಗ, ಕಪ್ಪು ಕಾವ್ಯ, ಕಾರ್ಯ, ಮಸ್ತಕಾಭಿಷೇಕ, ಆಣೆಪೀಣೆ, ದಲಿತ ಸಾಹಿತ್ಯ ಚಳವಳಿಯ ತಾತ್ವಿಕ ಚಿಂತನೆ, ಅಂಬೇಡ್ಕರ್ ವಿಚಾರಧಾರೆ, ಅಂಬೇಡ್ಕರ್ ವಾದ-ಸಂವಾದ, ಸಮಾವೇಶ, ಕೊರಗ ಜನಾಂಗ, ತಾಳಿಕೋಟೆ ದ್ಯಾಮವ್ವ, ಮೂರನೇ ಕಣ್ಣು, ದಲಿತ ಸಾಹಿತ್ಯ ನೆಲೆ ಹಿನ್ನೆಲೆ, ನಾದ ನಿನಾದ, ಪೂನಾಪ್ಯಾಕ್ಟ್ ಮತ್ತು ದಲಿತರೆತ್ತ ಸಾಗಬೇಕು? ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶಿವಾದ, ಕನ್ನಡ ಸಾಹಿತ್ಯ ಮತ್ತು ದೇಶಿಯುಗ, ದಲಿತ ಸಾಹಿತ್ಯ ಪ್ರವೇಶಿಕೆ, ಗೌರ್ಮೆಂಟ್ ಬ್ರಾಹ್ಮಣ ಮುಂತಾದ ಕೃತಿಗಳನ್ನು ಬರೆದಿದ್ದಾರೆ.

**ಪ್ರಶಸ್ತಿ ಪುರಸ್ಕಾರ ಬಹುಮಾನಗಳು :** ಅಹಿಂಸಾ ಚಪ್ಪಿ ಅದೃಷ್ಟ (ಕಥೆ), ಶ್ರೀ ಕೃಷ್ಣ ಆಲನಹಳ್ಳಿ ಪ್ರಶಸ್ತಿ - ಶೂದ್ರ ಪತ್ರಿಕೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೬), ಡಾ. ಅಂಬೇಡ್ಕರ್ ಫೆಲೋಶಿಪ್ ಪ್ರಶಸ್ತಿ ೧೯೯೬ ಸಮಗ್ರ ಬರವಣಿಗೆ ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ, ದೆಹಲಿ, ಅಮೇರಿಕನ್ ಬಯಾಗ್ರಫಿಕಲ್ ಇನ್‌ಸ್ಟಿಟ್ಯೂಟ್, ಯು.ಎಸ್.ಎ. ನಾಡಚೇತನ ಪ್ರಶಸ್ತಿ, ಮುಂತಾದ ಪ್ರಶಸ್ತಿಗಳು ಇವರನ್ನು ಅರಸಿ ಬಂದಿವೆ. ಕನ್ನಡ ಸಾಹಿತ್ಯ ಲೋಕದಲ್ಲಿ ಇವರ ಹೆಸರು ಅಚ್ಚಳಿಯದೇ ಉಳಿದಿದೆ. ಪ್ರಸ್ತುತ ಇವರು ಮೈಸೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

### ೨. ಸತ್ಯಾನಂದ ಪಾತ್ರೋಟ

ಜಿಲ್ಲೆಯ ದಲಿತ ಸಾಹಿತಿಗಳಲ್ಲಿ ಸತ್ಯಾನಂದ ಪಾತ್ರೋಟ ಅವರ ಹೆಸರು ಸ್ಮರಣೀಯವಾದದ್ದು. ಕವನ ಸಂಕಲನ, ನಾಟಕಗಳನ್ನು ಬರೆಯುವುದರ ಮೂಲಕ ದಲಿತರ ಬವಣೆಗಳನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ಕಲಗುರ್ಕಿಯಲ್ಲಿ ತಿಮ್ಮಣ್ಣ ಮತ್ತು ಜೆಟೆವ್ವ

ದಂಪತಿಗಳ ಮಗನಾಗಿ ಜನಿಸಿದರು. ಸ್ನಾತಕೋತ್ತರ ಪದವಿ ಮತ್ತು ಬಿ.ಈಡಿ ಶಿಕ್ಷಣ ಪೂರೈಸಿದ ಇವರು ಎಸ್.ಬಿ. ಪಾಟೀಲ್ (ಕಾಳಿದಾಸ) ಜ್ಯೂ, ಕಾಲೇಜು. ಬಾಗಲಕೋಟೆಯಲ್ಲಿ ಕನ್ನಡ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**ಕೃತಿಗಳು:** ಕರಿ ನೆಲದ ಕಲೆಗಳು, ಜಾಜಿ ಮಲ್ಲಿಗೆ, ಕಲ್ಲಿಗೂ ಗೊತ್ತಿರುವ ಕತೆ, ಕರಿಯ ಕಟ್ಟಿದ ಕವನ, ನನ್ನ ಕನಸಿನ ಹುಡುಗಿ, ನದಿಗೊಂದು ಕನಸು ಮತ್ತು ಅವಳು.

**ನಾಟಕಗಳು:** ನಮಗ ಯಾರು ಇಲ್ಲೊ ಎಪ್ಪಾ ಸಾಕ್ಷಿ, ಮತ್ತೊಬ್ಬ ಏಕಲವ್ಯ, ಹ್ಯಾದವರು, ನಾಟಕಗಳು ಪ್ರಸಿದ್ಧವಾಗಿವೆ.

ರಕ್ತದ ಹೊಳೆ ಬೆಂಕಿಯ ಮಳೆ, ನೆನಪಿನ ಸಂಚಿಕೆ ಸಾಮರಸ್ಯ ಮುಂತಾದ ಕೃತಿಗಳು ಇವರ ಸಂಪಾದನೆಯಲ್ಲಿ ಬಂದಿವೆ. ಇವೆಲ್ಲವು ದಲಿತ ಜನರ ಬದುಕು ಮತ್ತು ಶೋಷಣೆಯ ನೋವನ್ನು ಹೇಳುತ್ತವೆ. ದಲಿತ ಚಳವಳಿ ಮತ್ತು ದಲಿತ ಸಾಹಿತ್ಯದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದು ಈ ಭಾಗದ ದಲಿತ ಜನರ ನೋವುಗಳನ್ನು ಬರವಣಿಗೆ ಮೂಲಕ ತಿಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ಈ ನಿಟ್ಟಿನಲ್ಲಿ ಧ್ವನಿ ಸುರುಳಿಗಳನ್ನು ಬಿಡುಗಡೆಮಾಡಿದ್ದಾರೆ. ಅನೇಕ ಕಾರ್ಯಕ್ರಮ, ಭಾಷಣಗಳ ಮುಖಾಂತರ ದಲಿತರಿಗೆ ಸಲಹೆ ಸೂಚನೆಗಳನ್ನು ಕೊಟ್ಟಿದ್ದಾರೆ.

**೩. ಅರ್ಜುನ ಗೊಳಸಂಗಿ**

ಅರ್ಜುನ ಗೊಳಸಂಗಿ ದಲಿತ ಸಾಹಿತ್ಯ ಕ್ಷೇತ್ರದಲ್ಲಿ ಇವರ ಹೆಸರು ಪ್ರಮುಖವಾಗಿ ಕೇಳಿಬರುತ್ತದೆ. ಬಿಜಾಪುರ ಜಿಲ್ಲೆ ಬಸವನ ಬಾಗೇವಾಡಿ ತಾಲ್ಲೂಕಿನ ಗೊಳಸಂಗಿ ಗ್ರಾಮದಲ್ಲಿ ೧೦.೦೭.೧೯೬೬ರಲ್ಲಿ ಜನಿಸಿದರು. ಸ್ನಾತಕೋತ್ತರ ಶಿಕ್ಷಣವನ್ನು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಪೂರೈಸಿ ಅಲ್ಲಿಯೇ ಪಿಎಚ್.ಡಿ ಪದವಿಯನ್ನು ಪಡೆದುಕೊಂಡರು. ಹುಲಕೋಟಿಯ ಎಚ್.ಕೆ.ಪಾಟೀಲ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ದಲಿತಪರ ಚಿಂತನೆ, ದಲಿತಪರ ಬರವಣಿಗೆಯಲ್ಲಿ ಸದಾ ಕ್ರಿಯಾಶೀಲರಾಗಿರುತ್ತಾರೆ. ದಲಿತ ಸಾಹಿತ್ಯ ಪರಿಷತ್ತಿನ ರಾಜ್ಯ ಘಟಕವನ್ನು ಸ್ಥಾಪಿಸಿ, ಅಧ್ಯಕ್ಷರಾಗಿ ಅನೇಕ ದಲಿತ ಕೃತಿಗಳನ್ನು ಪ್ರಕಟಿಸಲು ನೆರವು ಮಾಡಿದ್ದಾರೆ. ಅನೇಕ ಸಂಘ-ಸಂಸ್ಥೆಗಳ ಸದಸ್ಯರಾಗಿದ್ದು ದಲಿತ ಹೋರಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತಮ್ಮ ಬರವಣಿಗೆಯ ಮೂಲಕ ಓದುಗರ ಗಮನ ಸೆಳೆಯುವಲ್ಲಿ ಇವರ ಕೃತಿಗಳು ಯಶಸ್ಸು ಕಂಡಿವೆ.

**ಕೃತಿಗಳು:** ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ಡೊಳ್ಳಿನ ಪದಗಳು (ಜಾನಪದ), ದಲಿತಜ್ಞ (ವಿಮರ್ಶೆ), ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದೀಯ ಅಧ್ಯಯನ (ಪಿಎಚ್.ಡಿ ಪ್ರಬಂಧ), ಕನ್ನಡ ದಲಿತ ಸಾಹಿತ್ಯ ಸಮಾಲೋಕನ, ಹುಸಿ ಇಲ್ಲದ ಗೂಡಿನೊಳಗೆ, ಹಲವಾರು ಕೃತಿಗಳನ್ನು ಬರೆಯುವುದರ

ಮುಖಾಂತರ ದಲಿತ ಸಾಹಿತ್ಯ ಓದುಗರಲ್ಲಿ ಸ್ವಾಭಿಮಾನದ ಕಿಚ್ಚನ್ನು ಮೂಡಿಸಿದ್ದಾರೆ. ಹಾಗಾಗಿ ಅನೇಕ ಪ್ರಶಸ್ತಿಗಳು ಇವರನ್ನು ಅರಸಿ ಬಂದಿವೆ.

ಪ್ರಶಸ್ತಿಗಳು: ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ ಕೃತಿಗೆ ಚೌಡಯ್ಯ ದಾನಪುರ ಸಮಿತಿ ''ಉತ್ತಮ ಕೃತಿ ಪ್ರಶಸ್ತಿ'', ''ಉತ್ತರ ಕರ್ನಾಟಕ ಶ್ರೇಷ್ಠ ಯುವ ಸಾಹಿತಿ ಪ್ರಶಸ್ತಿ'', ''ವಿಶ್ವೇಶ್ವರಯ್ಯ ಸಾಹಿತಿ ಪ್ರಶಸ್ತಿ'', ''ದಶಕದ ಶ್ರೇಷ್ಠ ಸಂಶೋಧಕ'', ''ಶಿಕ್ಷಣ ಭೂಷಣ'', ಮುರುಘಾಮಠ, ಚಿತ್ರದುರ್ಗ ಹೀಗೆ ಅನೇಕ ಪ್ರಶಸ್ತಿಗಳು ಅರ್ಜುನ ಗೊಳಸಂಗಿ ಅವರನ್ನು ಹುಡುಕಿಕೊಂಡು ಬಂದಿವೆ. ಉತ್ತರ ಕರ್ನಾಟಕದ ದಲಿತ ಸಾಹಿತ್ಯದಲ್ಲಿ ಇವರು ಸಾಕಷ್ಟು ಕೆಲಸ ಮಾಡಿದ್ದು ಜನಪದ ಹಾಡುಗಾರರಾಗಿ 'ಉತ್ತಮ ಜನಪದ ಹಾಡುಗಾರ' ಎಂಬ ಪ್ರಶಸ್ತಿಯನ್ನು ಕೂಡ ಪಡೆದುಕೊಂಡಿದ್ದಾರೆ. ಹೀಗೆ ಜನಪದ, ಸಾಹಿತ್ಯ, ದಲಿತ ಚಳವಳಿ ಹಲವಾರು ಕ್ಷೇತ್ರಗಳಲ್ಲಿ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. ಯುವ ಲೇಖಕರಿಗೆ ಪ್ರೋತ್ಸಾಹ ನೀಡುತ್ತ ಸಲಹೆ ಸೂಚನೆಗಳನ್ನು ಕೊಡುತ್ತ ದಲಿತ ಲೇಖಕರಿಗೆ ಸ್ಫೂರ್ತಿಯಾಗಿದ್ದಾರೆ.

**೪. ಹಣಮಂತ ಪೋತೆ**

ದಲಿತ ಲೋಕದ ಜಾನಪದ ಸಾಹಿತಿಗಳ ಹೆಸರಿನಲ್ಲಿ ಎಚ್.ಟಿ. ಪೋತೆ ಅವರು ಒಬ್ಬರು. ಮೂಲತಃ ಉತ್ತರ ಕರ್ನಾಟಕದ ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಹಂಜಗಿ ಗ್ರಾಮದ ತಿಪ್ಪಣ್ಣ ಅಂಬವ್ವ ಅವರ ಮಗನಾಗಿ ೧೯೬೨ರಲ್ಲಿ ಜನಿಸಿದರು. ಅವರ ಶಿಕ್ಷಣ ಆರಂಭದಲ್ಲಿ ಹಂಜಗಿ, ಇಂಡಿ, ನಿಂಬಾಳ ರಾನಡೆ ಪ್ರೌಢಶಾಲೆ ಹಾಗೂ ಬಿಜಾಪುರದಲ್ಲಿ ಬಿ.ಎ. ತನಕ ಓದಿ ಮುಂದಿನ ಎಂ.ಎ. ಕನ್ನಡ ಜಾನಪದ ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ ದ್ವಿತೀಯ ರ್‍ಯಾಂಕ್ ಪಡೆದುಕೊಂಡರು. ಡಾ.ಪಿ.ಕೆ.ಖಂಡೋಬಾ ಅವರ ಮಾರ್ಗದರ್ಶನದಲ್ಲಿ ''ಹೈದ್ರಾಬಾದ ಕರ್ನಾಟಕದ ಜಾನಪದ ವಾದ್ಯಗಳು'' ವಿಷಯಕ್ಕೆ ಎಂ.ಫಿಲ್ ಹಾಗೂ ''ಹೈದ್ರಾಬಾದ ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು'' ಎಂಬ ವಿಷಯದ ಮೇಲೆ ಸಂಶೋಧನಾ ಅಧ್ಯಯನ ಕೈಗೊಂಡು ಡಾಕ್ಟರೇಟ್ ಪದವಿ ಪಡೆದುಕೊಂಡಿದ್ದಾರೆ. ೧೯೯೫ ರಿಂದ ರಾಯಚೂರು ಸ್ನಾತಕೋತ್ತರ ಕೇಂದ್ರದ ಕನ್ನಡ ವಿಭಾಗದಲ್ಲಿ ಅಧ್ಯಾಪಕರಾಗಿ ಈಗ ಪ್ರವಾಚಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಡಾ. ಪೋತೆ ಅವರು ಬರಹ ಸಾಹಿತ್ಯ ರಚನೆಯೊಂದಿಗೆ ಬದುಕು ಕೂಡ ಮುಖ್ಯವೆಂದು ಬಗೆದವರು. ಹೀಗಾಗಿ ತಾವು ಬದುಕಬೇಕು. ತನ್ನ ಕುಟುಂಬದೊಂದಿಗೆ ಶತಮಾನಗಳಿಂದ ವಂಚಿತರಾದ ದಲಿತ ಜನಾಂಗದ ಮೇಲಿನ ಶೋಷಣೆ ನಿಲ್ಲಬೇಕು. ಜನರಲ್ಲಿ ಶಿಕ್ಷಣ ಸಂಘಟನೆ ಹೋರಾಟದ ಬಗ್ಗೆ ಅರಿವು ಮೂಡಿಸಬೇಕೆಂದು ಬಿಜಾಪುರದಲ್ಲಿ ದಲಿತ ಸಂಘರ್ಷ ಸಮಿತಿ ವಿದ್ಯಾರ್ಥಿ ದಿಸೆಯಲ್ಲಿ ಹುಟ್ಟುಹಾಕಿಕೊಂಡು ಅದರ ಸಂಸ್ಥಾಪಕರಲ್ಲಿ ಒಬ್ಬರಾಗಿ ಬೆಳೆದರು. ಅಸ್ಪೃಶ್ಯತಾ ನಿವಾರಣೆ, ದಲಿತ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಕಂಕಣಬದ್ಧರಾಗಿದ್ದಾರೆ. ಅಂಬೇಡ್ಕರ್ ಸಂಘ, ಯುವಕ ಮಂಡಳಿ ಸ್ಥಾಪಿಸುವ ಮೂಲಕ ಬುದ್ಧ, ಬಸವ, ಅಂಬೇಡ್ಕರ್, ಕನಕರಂಥ

ವಿಚಾರಧಾರೆಗಳನ್ನು ಓದಿ ಅರ್ಥೈಸಿಕೊಂಡು ಜನರಿಗೆ ಸಂದೇಶ ತಲುಪಿಸುವಲ್ಲಿ ಯಶಸ್ವಿ ಆಗಿದ್ದಾರೆ. ಹೀಗಾಗಿಯೇ ಗುವಿಗು ಎಸ್.ಸಿ.ಎಸ್.ಟಿ. ಸಂಶೋಧನಾ ವಿದ್ಯಾರ್ಥಿಗಳ ಸಂಘದ ಅಧ್ಯಕ್ಷರಾಗಿ, ಡಾ. ಅಂಬೇಡ್ಕರ್ ಶತಮಾನೋತ್ಸವ ಸಮಿತಿ ಅಧ್ಯಕ್ಷರಾಗಿ, ರಾಯಚೂರು ಜಿಲ್ಲಾ ದಲಿತ ಸಾಹಿತ್ಯ ಪರಿಷತ್ತು ಅಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಸಂಘದ ಕಾರ್ಯಾಧ್ಯಕ್ಷರಾಗಿ, ಹತ್ತು ಹಲವು ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ. ಅನೇಕ ವಿಚಾರ ಸಂಕಿರಣ ತಾಲ್ಲೂಕು, ಜಿಲ್ಲಾ, ಅಖಿಲ ಭಾರತ ಮಟ್ಟದ ಸಮ್ಮೇಳನ ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡನೆ, ಸಂಪಾದಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಅಧ್ಯಾಪನ ಸಂಘಟನೆ ಜೊತೆಜೊತೆಗೆ ಅಧ್ಯಯನ ಕೈಕೊಂಡಿದ್ದಾರೆ. ಜಾನಪದ ಸಂಶೋಧನೆ-ವಿಮರ್ಶೆ-ದಲಿತ-ಬಂಡಾಯ-ವಿಚಾರಧಾರೆಗೆ ಒಪ್ಪಿಕೊಂಡು ಕೃತಿ ರಚಿಸುತ್ತಾ ಬಂದಿದ್ದಾರೆ. ಅವುಗಳು ಜಾನಪದ ಸಿಂಗಾರ, ಡಾ. ಅಂಬೇಡ್ಕರ್: ದಲಿತ ಚಳವಳಿ, ಬುದ್ಧನೆಡೆಗೆ, ಫುಲೆ-ಶಾಹು-ಅಂಬೇಡ್ಕರ್, ದಲಿತಾಂತರಗ, ಅನ್ವೇಷಣೆ (ಸಂ), ಶ್ರೀರಾಮಾಯಣ ಮಹಾನ್ವೇಷಣಂ ದರ್ಶನ (ಸಂ), ಬುದ್ಧ (ಜೀವನ ಚರಿತ್ರೆ) ಹೀಗೆ ಹಲವು ಮೌಲಿಕ ಕೃತಿಗಳನ್ನು ರಚಿಸಿ ಹೊರತಂದಿದ್ದಾರೆ.

**೫. ಕುಮಾರ ಕಕ್ಕಯ್ಯ ಪೋಳ**

ಎಪ್ಪತ್ತರ ದಶಕದ ಬೂಸಾ ಪ್ರಕರಣ, ದಲಿತ-ಬಂಡಾಯದ ಗಾಳಿ ಬೀಸುವ ಮೊದಲೇ ಶೋಷಿತರ ಚಿಂತನೆಯ ನೆಲೆಯಲ್ಲಿ ಅಂಬೇಡ್ಕರ್ ಅವರ ವಿಚಾರ ಧಾರೆಗಳಿಗೆ ಪ್ರಭಾವಿತರಾಗಿ ಸಾಹಿತ್ಯ ಕೃಷಿಗೆ ತೊಡಗಿದವರು ಕುಮಾರ ಕಕ್ಕಯ್ಯ ಪೋಳ. ವೃತ್ತಿಯಿಂದ ಅಧಿಕಾರಿಯಾಗಿ ಪ್ರವೃತ್ತಿಯಿಂದ ಸಾಹಿತಿಯಾಗಿ, ವಿಚಾರವಾದಿಗಳಾಗಿ ಮನುಷ್ಯಪರವಾದ ಚಿಂತನೆಗೈದರು. ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಚಾಂದಕವಠೆಯಲ್ಲಿ ಅಸ್ಪೃಶ್ಯ ವರ್ಗದ ಡೋಹರ ಸಾಯಬಣ್ಣ, ರಾಯವ್ವ ದಂಪತಿಗಳಿಗೆ ದಿನಾಂಕ ೨೮.೦೭.೧೯೨೬ ರಂದು ಭೀಮರಾವ್ ಪೋಳ ಜನಿಸಿದರು. ಸಿಂದಗಿಯ ಧರ್ಮಾರ್ಥ ಬೊರ್ಡಿಂಗ್‌ನಲ್ಲಿ ೭ನೇ ತರಗತಿ ಅಭ್ಯಾಸ ಮಾಡಿ ಕಾಕಾ ಕಾರ್ಖಾನೀಸ್‌ರ ಬೋರ್ಡಿಂಗ್‌ದಲ್ಲಿ ೮ ತರಗತಿ, ಮತ್ತು ಬಿಜಾಪುರ ಶ್ರೀ ಸಿದ್ದೇಶ್ವರ ಹೈಸ್ಕೂಲ್ ಸೇರಿ ೯ ಮತ್ತು ೧೦ನೇ ತರಗತಿ ಅಭ್ಯಸಿಸಿ, 'ಸೆಕೆಂಡರಿ ಸ್ಕೂಲ್ ಸರ್ಟಿಫಿಕೇಟ್, ಎಕ್ಸಾಮಿನೇಶನ್ ಬೋರ್ಡ್, ಬಾಂಬೆ' ಮಾರ್ಚ್ ೧೯೫೧ರಲ್ಲಿ ಎಸ್.ಎಸ್.ಸಿ. ಪದವಿ ಪಡೆದರು. ೧೯೫೬ರಲ್ಲಿ ಸರಕಾರಿ ನೌಕರಿಗೆ ಸೇರಿ ತಹಶೀಲ್ದಾರ ಹುದ್ದೆವರೆಗೂ ಏರಿ ನಿವೃತ್ತಿ ಹೊಂದಿದರು. ದಲಿತರ ಮೇಲೆ ನಡೆಯುತ್ತಿರುವ ಶೋಷಣೆಯಿಂದ ನೊಂದ ಕುಮಾರ ಕಕ್ಕಯ್ಯ ಪೋಳ ಬರಹಗಾರರಾಗಿ, ನಾಟಕಗಳ ಬರವಣಿಗೆಯಿಂದ ಸಮಾಜದ ನ್ಯೂನ್ಯತೆಯನ್ನು ಖಂಡಿಸಿದರು. ವಚನಗಳನ್ನು ಬರೆಯುವುದರ ಮೂಲಕ ಭೀಮರಾವ್ ಪೋಳ ಎಂಬ ತಮ್ಮ ಹೆಸರನ್ನು ಕುಮಾರ ಕಕ್ಕಯ್ಯ ಪೋಳ ಎಂದು ಬದಲಾಯಿಸಿಕೊಂಡರು.

**ಕೃತಿಗಳು:** ನಿಯತಿ ಶಾಸನ (ಕಾದಂಬರಿ), ಗೀಜಗನ ಗೂಡು (ಕಾದಂಬರಿ), ಸಮಾಜದ ತೊಡರಿಗೆ ಧರ್ಮದ ಕಗ್ಗಂಟು (ಕಥೆ), ಕುಮಾರ ಕಕ್ಕಯ್ಯನ ವಚನಗಳು, ಶರಣರ ಸಮಗ್ರ ಕ್ರಾಂತಿ, (ವಚನ ಸಂಕಲನಗಳು), ಇದು ನನ್ನ ಸಮಾಜ (ನಾಟಕ), ಧರ್ಮಕ್ರಾಂತಿ, ಮೂಕನ ಭಾಷಣ (ವಿಚಾರ-ವಿಮರ್ಶೆ) ಮುಂತಾದವುಗಳನ್ನು ಬರೆದು ಈ ಸಮಾಜದ ಪುರೋಹಿತ ಶಾಹಿ ವ್ಯವಸ್ಥೆಯನ್ನು ಖಂಡಿಸಿದ್ದಾರೆ. ಕುಮಾರ ಕಕ್ಕಯ್ಯ ಪೋಳ ಸಾಮಾಜಿಕ ಜವಾಬ್ದಾರಿಯಿರುವ ಒಬ್ಬ ಲೇಖಕ.

ಕಕ್ಕಯ್ಯ ಪೋಳ ಅವರು ಬಹುಮುಖ ಪ್ರತಿಭೆಯುಳ್ಳ ಲೇಖಕರು ಕಥೆ, ಕಾದಂಬರಿ, ನಾಟಕ, ಪ್ರಬಂಧ, ವೈಚಾರಿಕ ಕ್ಷೇತ್ರವಲ್ಲದೆ ವಚನಕಾರರು, ಸಂಶೋಧಕರು ಆತ್ಮ ಚರಿತ್ರೆಕಾರರು ಆಗಿರುವಂತೆ ಕವಿಗಳೂ ಆಗಿದ್ದಾರೆ. ನಾಡಿನ ಪ್ರತ್ರಿಕೆಗಳಲ್ಲಿ ಪಾಕ್ಷಿಕ, ಸಾಪ್ತಾಹಿಕ ಮಾಸಿಕ, ತ್ರೈಮಾಸಿಕ, ಅಭಿನಂದನಾ ಸಂಪುಟಗಳಲ್ಲಿ ಅವರ ಕವನಗಳು ಪ್ರಕಟಗೊಂಡಿವೆ. ಕನ್ನಡ, ಮರಾಠಿ, ಹಿಂದಿ, ಸಂಸ್ಕೃತ ಹಾಗೂ ಇಂಗ್ಲೀಷ್ ಹೀಗೆ ಪಂಚ ಭಾಷೆಗಳ ಪಂಡಿತರಾಗಿದ್ದರು. ಹೀಗೆ ಅನೇಕ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಕುಮಾರ ಕಕ್ಕಯ್ಯ ಪೋಳ ಬಿಜಾಪುರ ಜಿಲ್ಲೆಯ ದಲಿತರ ಆಸ್ತಿಯಾಗಿದ್ದಾರೆಂದರೆ ತಪ್ಪಾಗಲಾರದು.

* * *

## ಬಿಜಾಪುರ ಜಿಲ್ಲೆ (೧೯೯೧)



ಕೃಪೆ : ಮುನಿಸ್ವಾಮಿ ಅವರ ಬಿಜಾಪುರ ಜಿಲ್ಲಾ ಗ್ಯಾಜೆಟಿಯರ್, ಕಾವೇರಿ ಭವನ, ಗ್ಯಾಜೆಟಿಯರ್ ಇಲಾಖೆ, ಬೆಂಗಳೂರು




ಕೃಪೆ :ದೇವರಕೊಂಡಾರೆಡ್ಡಿ ಅವರ ಬಾಗಲಕೋಟೆ ಜಿಲ್ಲೆಯ ಶಾಸನಗಳ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

